# ಅಚಲ

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರದ
ದ್ವೈಮಾಸಿಕ




## ಅಚಲ ದಶಮಾನೋತ್ಸವ ಸಂಚಿಕೆ

# IN THE FOREFRONT OF INDIAN BANKING

By virtue of our excellent track record for the past 90 years, all India presence, high level.of financial and managerial skills, Strong Fundamentals and unmatched customer orientation, we are in the forefront of Indian Banking.

## STRONG FUNDAMENTALS

- Highest Reserves among all nationalised banks.
- Capital Adequacy Ratio of 10.39% as at March 1995.
- Top performance in profits, year after year, since inception.
- Ours is the highest dividend paid so far by any nationalised bank.
- NPA brought down to 12%.
- Total staff exceeding 53,000.
- Open culture and high employee commitment.

## COMPUTERISATION AND TECHNOLOGY UPGRADATION

- Commitment to and constant upgradation of capabilities in Computerisation/Information Technology.
- In-house capability to develop a wide range of customer specific Software packages.
- Canbank Computer Services, our subsidiary, for handling custodial services, to keep abreast and take advantage of Information Technology and to develop banking & financial software.
- 50 Totally Automated Branches and over 250 partially Computerised branches.
- ATM, Telephone Banking and Customer terminals are in place.
- Major centres connected through SWIFT/NICNET with focus on electronic funds transfer.

As the Bank committed to GOOD BANKING practices, we continue to be in the forefront of Indian Banking. And the pride of emerging India.






**CANARA BANK**

(A Govt.of India Undertaking)
H.O., 112, J. C. Road, Bangalore 560 002

## ಒಳ ಪುಟಗಳಲ್ಲಿ

ಪ್ರಿಯ ಸಂಗಾತಿಗಳೇ,

'ಅಚಲ' ಈ ಸಂಚಿಕೆಯೊಂದಿಗೆ ತನ್ನ ಹತ್ತನೆಯ ವರ್ಷವನ್ನು ಮುಗಿಸಿ ಹನ್ನೊಂದನೆಯ ವರ್ಷವನ್ನು ಆರಂಭಿಸಿದೆ. ಈ ಹತ್ತೂ ವರ್ಷಗಳಲ್ಲಿ ನೀವು ಚಂದಾದಾರರಾಗಿ, ಓದುಗರಾಗಿ, ಲೇಖಕರಾಗಿ, ಹಿತೈಷಿಗಳಾಗಿ ತುಂಬು ಪ್ರೀತಿಯಿಂದ ಸಹಕರಿಸಿದ್ದೀರಿ. 'ಅಚಲ' ಬಳಗ ಇದಕ್ಕಾಗಿ ನಿಮಗೆ ಆಭಾರಿಯಾಗಿದೆ.

ಆದರೆ ಈ ಪತ್ರಿಕೆ ಇನ್ನೂ ಹೆಚ್ಚು ಅರ್ಥಪೂರ್ಣವಾಗಿ, ಸಶಕ್ತವಾಗಿ ಬರಲು ಹೆಚ್ಚಿನ ಚಂದಾದಾರರ, ವಿಚಾರವಂತ ಲೇಖಕರ ಹೆಚ್ಚಿನ ಸಹಕಾರದ ಅವಶ್ಯಕತೆಯಿದೆ. ಅಷ್ಟೇ ಅಲ್ಲ, ಓದುಗರ ಟೀಕೆ, ಟಿಪ್ಪಣಿಗಳು ಪತ್ರಿಕೆಯನ್ನು ಬೆಳೆಸುತ್ತದೆ; ತಿದ್ದುತ್ತದೆ. ಇದಕ್ಕೆ ಹೃತ್ಪೂರ್ವಕವಾದ ಸ್ವಾಗತವಿದೆ.

– ಸಂಪಾದಕರು



**ಲೇಖನ, ಹಣ ಕಳುಹಿಸಬೇಕಾದ ವಿಳಾಸ**

**ಎನ್. ಗಾಯತ್ರಿ**
ಬಿ. 30, ರಿಸರ್ವ್ ಬ್ಯಾಂಕ್ ಸ್ಟಾಫ್ ಕ್ವಾರ್ಟರ್ಸ್
ಒಂದನೇ ಮೇನ್, 9ನೇ ಕ್ರಾಸ್, ವಿಜಯನಗರ, 2ನೇ ಹಂತ
ಬೆಂಗಳೂರು - 560 040.

ಚಂದಾ ವಿವರ

| | |
|---|---|
| ವಾರ್ಷಿಕ ಚಂದಾ | - 25 ರೂ. |
| ಆಜೀವ ಚಂದಾ | - 200 ರೂ. |
| ಸಂಸ್ಥೆಗಳಿಗೆ | - 250 ರೂ. |

**ಸಂಪುಟ - 10**
**ಸಂಚಿಕೆ - 6**
**ಸಂಪುಟ - 11**
**ಸಂಚಿಕೆ - 1**

## ಕೃತಜ್ಞತೆಗಳು

- ಇವರಿಗೆ :

1. ರಾಮಸುಧಾ ಚಾರಿಟಬಲ್ ಟ್ರಸ್ಟ್
2. ಪ್ರೊ. ಎಂ. ಆರ್. ದೊರೆಸ್ವಾಮಿ, ಕಾರ್ಯದರ್ಶಿ, ಪಿ.ಇ.ಎಸ್. ವಿದ್ಯಾಸಂಸ್ಥೆ
3. ಶ್ರೀ ಶ್ರೀಧರ ಆಚಾರ್, ಅಧ್ಯಕ್ಷರು, ಕರ್ನಾಟಕ ಪತ್ರಿಕಾ ಅಕಾಡೆಮಿ
4. ಶ್ರೀ ಆರ್.ಎಸ್. ರಾಜಾರಾಂ, ನವಕರ್ನಾಟಕ ಪಬ್ಲಿಕೇಷನ್ಸ್
5. ಶ್ರೀ ಎನ್. ಕುಮಾರ್, ವಕೀಲರು, ಬೆಂಗಳೂರು
6. ಶ್ರೀ ಟಿ. ಶ್ರೀನಿವಾಸ ರಾಜು, ಕ್ರೈಸ್ಟ್ ಕಾಲೇಜು, ಕನ್ನಡ ಸಂಘ
7. ಶ್ರೀ ಜೀವರಾಜ ಆಳ್ವ, ಶಾಸಕರು
8. ಶ್ರೀಮತಿ ಸೌಭಾಗ್ಯಲತಾ, ಮೈಸೂರು
9. ಶ್ರೀ ಎಚ್.ವಿ. ರೈ, ಕೆನರಾ ಬ್ಯಾಂಕ್
10. ಡಾ. ಆರ್.ವಿ. ರಾಘವೇಂದ್ರ, ಎಂ.ಜಿ. ಲ್ಯಾಬ್, ಮಲ್ಲೇಶ್ವರಂ
11. ಶ್ರೀ ಆರ್.ಪಿ. ಜಗದೀಶ್, ಪ್ರಜಾವಾಣಿ
12. ಶ್ರೀ ಎಂ. ಶ್ರೀಧರಮೂರ್ತಿ, ಎನ್.ಎಂ.ಕೆ.ಆರ್.ವಿ. ಕಾಲೇಜು
13. ಶ್ರೀ ಸನತ್‌ಕುಮಾರ್, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್
14. ಶ್ರೀ ಚೆನ್ನಕೇಶವ, ಚಿತ್ರಕಲಾ ಪರಿಷತ್
15. ಶ್ರೀ ಸುರೇಶ್, ಚಿತ್ರಕಲಾ ಪರಿಷತ್
16. ಶ್ರೀ ಬಡಿಗೇರ, ಕಲಾವಿದರು
17. ಶ್ರೀಮತಿ ಕೆ.ಆರ್. ಶಾರದಾ
18. ಶ್ರೀಮತಿ ಶೆಲ್ಲಮ್ಮ ಶ್ವೇತಾದ್ರಿ
19. ಶ್ರೀ ಎಸ್.ಬಿ. ಮುದ್ದಪ್ಪ, ನಿವೃತ್ತ ಐ.ಎ.ಎಸ್.
20. ಪ್ರೊ. ವಿ.ಬಿ. ಕುಟಿನೋ, ಪ್ರಾಂಶುಪಾಲರು, ವಿಶ್ವವಿದ್ಯಾಲಯ ಲಾ ಕಾಲೇಜು
21. ಶ್ರೀ ವೆಂಕಟಪ್ಪ, ಭಾರತೀಯ ರಿಸರ್ವ್ ಬ್ಯಾಂಕ್, ಬೆಂಗಳೂರು
22. ಶ್ರೀ ಎಂ. ಎನ್. ಶೇಷಪ್ಪ
23. ಶ್ರೀ ಜೆ.ಕೆ. ಜೈನ್, ಆಚಾರ್ಯ ಪಾಠಶಾಲಾ ಕಾಲೇಜು
24. ಶ್ರೀ ದಯಾನಂದ, ಸೇಂಟ್ ಜೋಸೆಫ್ ಕಾಲೇಜು
25. ಡಾ. ಬಿ.ಕೆ. ಸದಾಶಿವ ಸಿಂಗ್
26. ಕೀರ್ತಿ ಮಲ್ಹೋತ್ರ
27. ಶ್ರೀ ಟಿ. ವೆಂಕಟೇಶಮೂರ್ತಿ, ಸಮುದಾಯ
28. ಶ್ರೀ ಎಚ್.ಆರ್. ನಾಗರಾಜ್
29. ಶ್ರೀಮತಿ ಎಸ್. ಮಾಲತಿ
30. ಶ್ರೀಮತಿ ಬಿ.ಯು. ಸುಮಾ, ವಿಜಯನಗರ ಪ್ರಥಮ ದರ್ಜೆ ಸರ್ಕಾರಿ ಕಾಲೇಜು
31. ಶ್ರೀ ಎಂ.ಎನ್. ವಿಜಯೇಂದ್ರ, ಪತ್ರಕರ್ತ
32. ಶ್ರೀಮತಿ ಹೇಮಲತಾ, ಆಚಾರ್ಯ ಪಾಠಶಾಲಾ ಕಾಲೇಜು
33. ಶ್ರೀಮತಿ ಪ್ರಮೀಳಾ ಮಾಧವ, ಆಚಾರ್ಯ ಪಾಠಶಾಲಾ ಕಾಲೇಜು
34. ಶ್ರೀಮತಿ ಎಸ್. ಇಂದಿರಮ್ಮ, ಚಿಕ್ಕನಾಯಕನಹಳ್ಳಿ
35. ಶ್ರೀಮತಿ ಎಸ್.ಜಿ. ಸುಶೀಲಮ್ಮ, ಸುಮಂಗಲಿ ಸೇವಾಶ್ರಮ
36. ಶ್ರೀ ಬಿ.ವಿ. ನಾಗರಾಜ್, ಪ್ರಜಾವಾಣಿ
37. ಶ್ರೀ ಎನ್. ದೇವನಾಥ್, ಪ್ರಜಾವಾಣಿ
38. ಶ್ರೀ ಕೆ.ಎನ್. ಮಾಲತಿ, ಎಚ್.ಎ.ಎಲ್.
39. ಶ್ರೀ ಕೆ.ಎಸ್. ವಿಮಲ, ಜನವಾದಿ ಮಹಿಳಾ ಸಂಘಟನೆ
40. ಶ್ರೀ ಎ. ಎಬನೇಸರ್, ಬಿಷಪ್ ಕಾಟನ್ಸ್



# 'ಜಾಗೃತಿ' ಚಿತ್ರಸಂಗ್ರಹ




ಎಚ್.ವಿ. ಸಾವಿತ್ರಮ್ಮನವರ ಕೃತಿಗಳನ್ನು ಕುರಿತ ವಿಚಾರ ಸಂಕಿರಣದಲ್ಲಿ ಎಚ್.ವಿ. ಸಾವಿತ್ರಮ್ಮ, ವಿಜಯಾ ದಬ್ಬೆ, ಹೇಮಲತಾ ಮಹಿಷಿ.



ಹಿರಿಯ ಹೋರಾಟಗಾರ್ತಿ ರೇಣು ಚಕ್ರವರ್ತಿಯವರು ಅವರ ಭಾಷಣದ ನಂತರ 'ಜಾಗೃತಿ'ಯ ಬಳಗದೊಂದಿಗೆ.




ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆಯ ಅಂಗವಾಗಿ 1987, ಮಾರ್ಚ್‌ನಲ್ಲಿ 'ಜಾಗೃತಿ' ಯು ನೇತೃತ್ವ ವಹಿಸಿದ ಪ್ರತಿಭಟನಾ ಮೆರವಣಿಗೆ.



1988ರಲ್ಲಿನ ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆಯಲ್ಲಿ ಮುಖ್ಯ ಅತಿಥಿಗಳಾಗಿ ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್ ಮತ್ತು ಡಾ. ವಿಜಯಾ.




1988ರಲ್ಲಿ ನಡೆದ ಕವಿಗೋಷ್ಠಿಯಲ್ಲಿ ಅಧ್ಯಕ್ಷ ಭಾಷಣ ಮಾಡುತ್ತಿರುವ ಶ್ರೀ ಸು.ರಂ. ಎಕ್ಕುಂಡಿ.



ನವೆಂಬರ್ 1994ರಲ್ಲಿ ಸುಮಂಗಲಿ ಸೇವಾಶ್ರಮದಲ್ಲಿ ನಡೆದ 'ಮೇರಿ ಕ್ಯೂರಿ' ದಿನಾಚರಣೆ.

# ಸಂಪಾದಕೀಯ

## ಮಹಿಳಾ ಪ್ರಶ್ನೆ ರಾಜಕೀಯವಾಗಬೇಕು

'ಅಚಲ' ಕ್ಕೆ ಹತ್ತು ವರ್ಷಗಳು ತುಂಬಿವೆ. ಈ ಹತ್ತು ವರ್ಷಗಳ ಅವಧಿಯಲ್ಲಿ ಮಹಿಳೆಯರನ್ನು ಪ್ರಭಾವಿಸುವಂತೆ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಬದಲಾವಣೆಗಳು ತೀವ್ರಸ್ವರೂಪದಲ್ಲಿ ಬದಲಾಗುತ್ತಾ ಬಂದಿವೆ. ಈ ಹಿನ್ನೆಲೆಯಲ್ಲಿ ಮಹಿಳಾ ಚಳುವಳಿ ತಳೆದ ಸ್ವರೂಪ, ಎದುರಿಸುತ್ತಿರುವ ಸವಾಲುಗಳು ಮತ್ತೆ ಮತ್ತೆ ಚರ್ಚೆಗೆ ಒಳಗಾಗುತ್ತಾ ನಡೆದಿದೆ.

ಅಂತರರಾಷ್ಟ್ರೀಯ ಮಹಿಳಾ ವರ್ಷದಲ್ಲಿ ಹುಟ್ಟಿ ದಶಕದುದ್ದಕ್ಕೂ ವ್ಯಾಪಿಸುತ್ತಾ ನಡೆದ ಮಹಿಳಾ ಸಂಘಟನೆಗಳು ಪುರುಷಪ್ರಧಾನ ವ್ಯವಸ್ಥೆಯ ಮೌಲ್ಯಗಳ ವಿರುದ್ಧ ಹೋರಾಟ ಆರಂಭಿಸಿದವು. ಸ್ತ್ರೀಯರ ಮೇಲಿನ ದಬ್ಬಾಳಿಕೆ, ಅತ್ಯಾಚಾರ, ವರದಕ್ಷಿಣೆ, ಬಹುಪತ್ನಿತ್ವ, ವಿವಾಹ ವಿಚ್ಛೇದನ, ವಧೂದಹನ, ಬಿಳ್ಳಿ ಕಾರ್ಮಿಕ ಸ್ತ್ರೀಯರ ಸಮಸ್ಯೆ, ಒಟ್ಟಾಗಿ ದುಡಿಯುವ ಮಹಿಳೆಯರ ಸಮಸ್ಯೆಗಳು ಮಹಿಳಾ ಚಳುವಳಿಯ ಕಾರಣಗಳಾದವು. ಈ ಸಂದರ್ಭದಲ್ಲಿ ಕರ್ನಾಟಕದಲ್ಲಿ ಹುಟ್ಟಿಕೊಂಡ ಮೈಸೂರಿನ ಸಮತಾ, ಬೆಂಗಳೂರಿನ ವಿಮೋಚನಾ, ಜನವಾದಿ ಮಹಿಳಾ ಸಂಘಟನೆ, ಮಾನಿನಿ, ಜಾಗ್ರುತಿ ಮಹಿಳಾ ಅಧ್ಯಯನ ಕೇಂದ್ರದಂತಹ ಸಂಘಟನೆಗಳು ಮಹಿಳೆಯರನ್ನು ಸಂಘಟಿಸುತ್ತಲೇ ತಮ್ಮ ಸೈದ್ಧಾಂತಿಕ ನೆಲೆಗಳನ್ನು ಸ್ಪಷ್ಟಪಡಿಸಿಕೊಳ್ಳುವತ್ತ ದುಡಿಯುತ್ತಿವೆ.

ಅಂತರರಾಷ್ಟ್ರೀಯ ನೆಲೆಯಲ್ಲಿ ಉಂಟಾದ ರಾಜಕೀಯ ಬದಲಾವಣೆಗಳು ಹೆಣ್ಣಿನ ಬದುಕಿನ ಮೇಲೂ ಮಹತ್ತರ ಪ್ರಭಾವ ಬೀರಿದವು. ಸೋವಿಯತ್ ರಾಷ್ಟ್ರದ ಪತನದ ನಂತರ ಅಧಿಕಾರ ಬಣದ ಅಸಮತೋಲನದಿಂದ ಸಾಮ್ರಾಜ್ಯಶಾಹಿ ರಾಷ್ಟ್ರಗಳ ಕಾರ್ಯ ಶೈಲಿ ಮತ್ತೂ ಬದಲಾಯಿತು. ಸಾಮ್ರಾಜ್ಯಶಾಹಿ ರಾಷ್ಟ್ರಗಳ ನೀತಿಯನ್ನು ಮೂರನೇ ಜಗತ್ತಿನ ರಾಷ್ಟ್ರಗಳ ಮೇಲೆ ಹೇರುವ ಪ್ರಯತ್ನ ನಡೆಯುತ್ತಾ ಬಂದಿದೆ. ಆದ್ದರಿಂದಲೇ ಭಾರತೀಯ ಹೆಣ್ಣಿನ ಭವಿಷ್ಯವನ್ನು ನಿರ್ಧರಿಸುವವರು ಕೇವಲ ಪಾರ್ಲಿಮೆಂಟಿನಲ್ಲಿ ಕುಳಿತಿರುವ ಅಧಿಕಾರಸ್ಥರು ಮಾತ್ರವಲ್ಲದೆ, ಅದಕ್ಕಿಂತ ಹೆಚ್ಚಾಗಿ ವಿಶ್ವದ ಮಾರುಕಟ್ಟೆಯ ಗುತ್ತಿಗೆ ಹಿಡಿದಿರುವವರೂ ಆಗಿದ್ದಾರೆ.

ವಿಶ್ವದ ರಾಜಕಾರಣದಿಂದ ನೇರ ಪ್ರಭಾವ ಎದುರಿಸಬೇಕಾಗಿ ಬಂದದ್ದರಿಂದ ಉದಾರೀಕರಣ, ಜಾಗತೀಕರಣದ ಹೆಸರಿನಲ್ಲಿ ನಡೆಯುತ್ತಿರುವ ಸರ್ಕಾರಿ ಯೋಜನೆಗಳಿಂದ ಮಹಿಳೆಯರ ಸಂಕೋಲೆಗಳು ಇನ್ನೂ ಬಿಗಿಯಾಗಿ ಅವರನ್ನು ದುರವಸ್ಥೆಗೆ ತಳ್ಳುತ್ತಿವೆ. ಯಾವುದೇ ಸಾಮ್ರಾಜ್ಯಶಾಹಿ ದೇಶಗಳ ಮತ್ತು ಹಣಕಾಸು ಸಂಸ್ಥೆಗಳ ಒತ್ತಡವಿಲ್ಲದೆ ಅಭಿವೃದ್ಧಿ ಪಥವನ್ನು ಆರಿಸಿಕೊಳ್ಳಬಹುದಾದ ಸ್ವಾತಂತ್ರ್ಯವನ್ನು ಮೂಲಭೂತ ಹಕ್ಕಾಗಿ ಎಲ್ಲ ರಾಷ್ಟ್ರಗಳು ಸ್ವೀಕರಿಸುವಂತಾಗಬೇಕು. ಇಂತಹ ರಾಷ್ಟ್ರೀಯ ಚೌಕಟ್ಟಿನಲ್ಲಿ ಮಾತ್ರ ಮಹಿಳೆಯರು ತಮ್ಮ ಹಕ್ಕುಗಳನ್ನು ಸಮರ್ಥಿಸಿಕೊಳ್ಳಬಲ್ಲರು ಎಂಬ ಪ್ರಜ್ಞೆ ನಿಧಾನಾಗಿ ಬೆಳೆಯುತ್ತಿದೆ.

ಇತ್ತೀಚಿನ ವರ್ಷಗಳಲ್ಲಿ ಭಾರತದಲ್ಲಿ ಮಹಿಳೆಯರಿಗೆ ರಾಜಕೀಯ ಅಧಿಕಾರವನ್ನು ದೊರಕಿಸಿಕೊಡುವ ಯತ್ನ ಕೆಲವು ರಾಜ್ಯಗಳಲ್ಲಾದರೂ ನಡೆಯುತ್ತಿದೆ. ಕಳೆದ ಬಾರಿ ಕರ್ನಾಟಕ ಮತ್ತು ಮಹಾರಾಷ್ಟ್ರಗಳಲ್ಲಿ ನಡೆದ ಚುನಾವಣೆಯಲ್ಲಿ ಶೇಕಡಾ 40 ರಷ್ಟು ಮಹಿಳೆಯರು ಚುನಾಯಿತರಾದದ್ದು ದಾಖಲೆಯಷ್ಟೇ ಅಲ್ಲ, ಅಧಿಕಾರ ಪಡೆಯುವಲ್ಲಿ ಮಹಿಳೆಯರ ಭಾಗವಹಿಸುವಿಕೆಯ ಪ್ರಕ್ರಿಯೆಗೆ ಸಿಕ್ಕ ಚಾಲನೆಯಾಗಿ ಇದು ಮಹತ್ವದ ಘಟನೆಯೆನಿಸುತ್ತದೆ. ಪಂಚಾಯ್ತಿ ರಾಜ್ಯ ವ್ಯವಸ್ಥೆಯೂ ಮಹಿಳೆಯರಿಗೆ ಶೇಕಡಾ 33ರಷ್ಟು ಮೀಸಲಾತಿಯನ್ನು ನೀಡುವ ನಿರ್ಣಯ ತೆಗೆದುಕೊಂಡದ್ದು ಆಡಳಿತದ ಎಲ್ಲ ಸ್ತರಗಳಲ್ಲಿ ವಿಶೇಷವಾದ ಸ್ತ್ರೀಕೇಂದ್ರಿತ ತಿಳುವಳಿಕೆಯೊಂದು ಇದೆಯೆಂಬ ವಾಸ್ತವಾಂಶವನ್ನು ಅಧಿಕಾರದ ಮೇಲಿರುವವರು ಒಪ್ಪುವಂತೆ ಒತ್ತಡ ತಂದಿದೆ. ಈ ವ್ಯವಸ್ಥೆ ಮಹಿಳೆಯರ ಮೂಲಭೂತ ಅವಶ್ಯಕತೆಗಳಿಗೆ ಮತ್ತು ಕಾಳಜಿಗಳಿಗೆ ಹೆಚ್ಚಿನ ಗಮನ ನೀಡಬೇಕೆಂಬುದನ್ನು ಎತ್ತಿ ಹಿಡಿಯುತ್ತದೆ. ಇಷ್ಟೆಲ್ಲ ಅವಕಾಶಗಳ ನಂತರವೂ ಈ ಸ್ಥಾನಗಳಿಗೆ ಆಯ್ಕೆಯಾಗುವಲ್ಲಿ ಮತ್ತು ಅದನ್ನು ದಕ್ಷ ರೀತಿಯಲ್ಲಿ ನಡೆಸಿಕೊಂಡು ಹೋಗುವಲ್ಲಿ ಈ ಮಹಿಳಾ ಪ್ರತಿನಿಧಿಗಳನ್ನು ತರಬೇತು ಮಾಡುವಲ್ಲಿ ಸರ್ಕಾರದೊಂದಿಗೆ ಮಹಿಳಾ ಸಂಘಟನೆಗಳೂ ಕೈಜೋಡಿಸುತ್ತಾ ಬಂದಿವೆ.

ರಾಷ್ಟ್ರೀಯ ನೆಲೆಯಲ್ಲಿ ಆಳುವ ಸರ್ಕಾರವೇ ಕೈಗೂಂಡ ಸಾಕ್ಷರತಾ ಚಳುವಳಿ ಮಹಿಳೆಯರ ಶತಮಾನಗಳ ಅಂಧಕಾರವನ್ನು ಹೋಗಲಾಡಿಸಲು ಸ್ವಲ್ಪವಾದರೂ ಸಹಾಯ ಮಾಡಿವೆ. ಅಕ್ಷರ ಕಲಿಕೆಯ ನೆಪದಲ್ಲಿ ಹೆಚ್ಚಿದ ತಿಳುವಳಿಕೆ ಆರೋಗ್ಯವಂತ ಮಹಿಳೆಯರನ್ನು ರೂಪಿಸುವತ್ತ ದುಡಿದಿದೆ. ಇಂದು ದೇಶದಲ್ಲಿ ಬಹು ಸಂಖ್ಯೆಯಲ್ಲಿ ಮಹಿಳೆಯರು ಮತ್ತು ಮಹಿಳಾ ಸಂಘಟನೆಗಳು ಈ ಸಾಕ್ಷರತಾ ಚಳುವಳಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಈ ಚಳುವಳಿಯ ಫಲಾನುಭವಿಗಳಾಗಿರುವುದಷ್ಟೇ ಅಲ್ಲದೆ, ಚಳುವಳಿಯ ನೇತೃತ್ವವಹಿಸಿದ ಹಲವಾರು ಶಿಕ್ಷಿತ ಮಹಿಳೆಯರು ನಮಗೆ ಕಾಣಸಿಗುತ್ತಾರೆ. ಇಂತಹದೊಂದು ಕ್ರಿಯಾಶೀಲ ಚಟುವಟಿಕೆಯಿಂದಾಗಿ ಮಹಿಳೆಯರ ಕಾರ್ಯಕ್ಷೇತ್ರ ವಿಸ್ತರಿಸಿದೆ. ಸಾಮಾಜಿಕ ಪಿಡುಗುಗಳ ವಿರುದ್ಧ ಹೋರಾಡಲು ದಿಟ್ಟ ಮನೋಭಾವವನ್ನೂ, ಸ್ವಸಮರ್ಥನೆಯ ಸಾಮರ್ಥ್ಯವನ್ನೂ ಕಲಿಸಿದೆ. ಕುಡಿತದ ವಿರುದ್ಧ ಕ್ರಿಯಾಶೀಲವಾಗಿ ಪ್ರತಿಭಟಿಸಿದ ಮಂಡ್ಯ, ದಕ್ಷಿಣ ಕನ್ನಡ ಜಿಲ್ಲೆಯ ಮಹಿಳೆಯರ ಎದೆಗಾರಿಕೆ ಮಹಿಳಾ ಚಳುವಳಿಗೇ ದಿಕ್ಸೂಚಿಯಾಗಿದೆ.

1991ರಲ್ಲಿ ವಿದೇಶೀ ಬ್ಯಾಂಕಿನ ಆಶೀರ್ವಾದದಿಂದ ಕೇಂದ್ರ ಸರ್ಕಾರವು ತಂದ ಹೊಸ ಆರ್ಥಿಕ ಹಾಗೂ ಕೈಗಾರಿಕಾ ನೀತಿಯ ವಿಷವ್ಯೂಹವು 1994ರ ಏಪ್ರಿಲ್ 15ರಂದು ಗ್ಯಾಟ್ ಒಪ್ಪಂದಕ್ಕೆ ಸಹಿ ಹಾಕುವುದರೊಂದಿಗೆ ಪೂರ್ಣವಾಗಿದೆ. ಸಂವಿಧಾನದಲ್ಲಿ ಮಾತ್ರ ಉಳಿದಿರುವ ಸಮಾಜವಾದಿ ಧೋರಣೆಗಳು, ಸಾಮಾಜಿಕ ನ್ಯಾಯವಿರಬೇಕೆಂಬ ಕಾಳಜಿಗಳು ಈಗ ಕಣ್ಮರೆಯಾಗಿ ಮನುಷ್ಯನ ಅಸ್ತಿತ್ವವನ್ನು ನಿರ್ಣಯಿಸುವ ಏಕೈಕ ಪ್ರಜಾಸತ್ತಾತ್ಮಕ ಮಾರ್ಗ ಮಾರುಕಟ್ಟೆ ಎಂಬ ಧೋರಣೆ ಬೆಳೆದು ನಿಂತಿದೆ. ಇದರಿಂದ ಪಿತೃಪ್ರಧಾನ ವ್ಯವಸ್ಥೆಯಲ್ಲಿ ಇದುವರೆಗೂ ಲೈಂಗಿಕ ವಸ್ತುವಾಗಿ ಪರಿಭಾವಿಸಲ್ಪಟ್ಟ ಮಹಿಳೆಯ ಕಾರ್ಯಕ್ಷೇತ್ರವನ್ನು ಲೈಂಗಿಕ ಕಾರ್ಖಾನೆಯೆಂಬಂತೆ ಭಾವಿಸುವ ಸಂಪ್ರದಾಯ ಬೆಳೆಯುತ್ತಿದೆ.

ವಿದೇಶೀ ವಿನಿಮಯದ ಆಸೆಯಿಂದ ಪ್ರವಾಸೋದ್ಯಮಕ್ಕೆ ಇನ್ನಿಲ್ಲದಂತೆ ಸರ್ಕಾರ ಒತ್ತು ಕೊಡುತ್ತಿದೆ. ಪ್ರವಾಸೋದ್ಯಮವನ್ನು ಲೈಂಗಿಕ ಪ್ರವಾಸೋದ್ಯಮವೆಂದು ಬದಲಿಸಬೇಕಾಗಿದೆ. ಈ ಎಲ್ಲ ದುಷ್ಪರಿಣಾಮಗಳ ವಿರುದ್ಧ ಹೋರಾಡುವುದೂ ಮಹಿಳಾ ಹೋರಾಟದ ಸವಾಲಾಗಿದೆ.

ಕಳೆದ ದಶಕದಲ್ಲಿ ಹೆಣ್ಣಿಗಿರುವ ಇಂತಹ ಎಲ್ಲ ಪ್ರತಿಕೂಲ ವಾತಾವರಣದ ಹಿನ್ನೆಲೆಯಲ್ಲೂ ಮಹಿಳಾ ಚಳುವಳಿ ತನ್ನ ಬೇರುಗಳನ್ನು ವಿಶಾಲವಾಗಿ ವ್ಯಾಪಿಸಿಕೊಂಡು ಬೆಳೆಯುತ್ತಾ ಹೊರಟಿದೆ. ಇಷ್ಟೆಲ್ಲ ಆಶಾದಾಯಕ ಬೆಳವಣಿಗೆಯ ನಂತರವೂ ಮಹಿಳಾ ಚಳುವಳಿ ಬೀರಬೇಕಾದ ಪರಿಣಾಮವನ್ನು ಬೀರಿಲ್ಲವೆಂಬುದೂ ಅಷ್ಟೇ ಸತ್ಯ. ಅಧಿಕಾರದ ನೆಲೆಯಲ್ಲಿರುವವರನ್ನು ಅಲುಗಾಡಿಸುವಂತಹ, ನೊಂದ ಮಹಿಳೆಯರೆಲ್ಲರನ್ನೂ ಸಂಘಟಿಸುವಂತಹ ಚಳುವಳಿಯು ಇನ್ನೂ ಮೂಡಿಲ್ಲದಿರುವುದಕ್ಕೆ ಹಲವಾರು ಪ್ರಬಲ ಕಾರಣಗಳನ್ನು ಕಾಣಬಹುದಾಗಿದೆ. ಇಷ್ಟೊಂದು ಸಂಘಟಿತ ಮಹಿಳೆಯರಿಗೆಲ್ಲಾ ಅನ್ವಯವಾಗಬಹುದಾದಂತಹ ಏಕರೂಪದ ಸೈದ್ಧಾಂತಿಕ ಚೌಕಟ್ಟು, ಮತ್ತು ಹೋರಾಟದ ವಿಧಾನವಿಲ್ಲದಿರುವುದು ಮಹಿಳಾ ಚಳುವಳಿಯ ಪ್ರಬಲ ಸೋಲಿಗೆ ಕಾರಣವಾಗಿದೆ.

ಏಕರೂಪದ ಚೌಕಟ್ಟು ಅಸಾಧ್ಯವೆನ್ನುವಂತೆ ಬೆಳೆದಿರುವ ಸಂಘಟನೆಗಳ ಧ್ಯೇಯ, ಸ್ವರೂಪದ ಮಾದರಿಗಳು ಚಳುವಳಿಯು ಪ್ರಭಾವಶಾಲಿಯಾಗದಂತೆ, ಕೆಲವೊಮ್ಮೆ ದಾರಿ ತಪ್ಪಿಸುವ ಕೆಲಸವನ್ನೂ ಮಾಡುತ್ತಿದೆ. ಈ ಬೆಳವಣಿಗೆ ಇತ್ತೀಚಿನ ಬೀಜಿಂಗ್ ಸಮಾವೇಶ ಸಂದರ್ಭದಲ್ಲಿ ಹೆಚ್ಚು ಧ್ರುವೀಕರಣಗೊಂಡು ಸಮಸ್ಯೆಯ ಸ್ವರೂಪವನ್ನು ಸ್ಪಷ್ಟಪಡಿಸಿದೆ.

ಭಾರತವು ಬೀಜಿಂಗ್‌ನಲ್ಲಿ ಮಾಡಿದ ದಸ್ತಾವೇಜನ್ನು ಚರ್ಚಿಸಲು, ಪರಿಷ್ಕರಿಸಲು ಮಹಿಳಾ ಸಂಘಟನೆಗಳು ಎರಡು ಭಿನ್ನ ಗುಂಪುಗಳಾದವು.

ಪಕ್ಷ ರಾಜಕೀಯದಲ್ಲಿ ನಂಬಿಕೆಯಿರಿಸಿದ ಮಹಿಳಾ ಸಂಘಟನೆಗಳು ಒಂದು ಗುಂಪಾದರೆ, ಸ್ವಯಂಸೇವಾ ಸಂಘಟನೆಗಳಡಿಯಲ್ಲಿ ಕಾರ್ಯನಿರತವಾಗಿರುವ ಮತ್ತೊಂದು ಗುಂಪು ಇದೆ.

ಪಕ್ಷ ರಾಜಕೀಯದಲ್ಲಿ ನಂಬಿಕೆಯಿರಿಸಿದ ಮಹಿಳಾ ಸಂಘಟನೆಗಳು ಈ ವ್ಯವಸ್ಥೆಯಲ್ಲಿದ್ದುಕೊಂಡೇ ಬದಲಾಣೆಗಾಗಿ ಸ್ತ್ರೀವಾದಿ ಹೋರಾಟ ನಡೆಯಬೇಕೆನ್ನುವುದು ಅನಿವಾರ್ಯವೆಂದು ಭಾವಿಸಿರುವಂತಹವು. ಮಾನವೀಯತಾವಾದಿ ಪಕ್ಷಗಳೊಳಗೂ ಇರಬಹುದಾದ ಪಿತೃಪ್ರಧಾನ ಮೌಲ್ಯಗಳ ವಿರುದ್ಧ ಹೋರಾಡುತ್ತಲೇ, ಅವರನ್ನು ತಿದ್ದಬಹುದೆಂದು ಭಾವಿಸುವ ಈ ಮಹಿಳಾ ಸಂಘಟನೆಗಳು ಎರಡು ಕಾರ್ಯಕ್ರಮವನ್ನು ತಮ್ಮ ಮುಂದೆ ಇಟ್ಟುಕೊಂಡಿವೆ: ಮಹಿಳಾ ಚಳುವಳಿಯ ಭಾಷೆ ಮತ್ತು ಘೋಷಣೆಗಳನ್ನು ಸರಿಯಾದ ರೀತಿಯಲ್ಲಿ ಸರ್ಕಾರಕ್ಕೆ ಮನವರಿಕೆ ಮಾಡುವುದು, ಮಹಿಳೆಯರ ದುಃಸ್ಥಿತಿಯು ಹೆಚ್ಚುತ್ತಿರುವಲ್ಲಿ ಸರ್ಕಾರದ ನಿಷ್ಕ್ರಿಯತೆಯನ್ನು ಕುರಿತು ಅದರ ಸ್ವರೂಪವನ್ನು ಬಯಲುಮಾಡಿ ಅದಕ್ಕೆ ಎದುರಾಗಿ ಕ್ರಿಯಾಶೀಲವಾಗುವುದು. ಅಷ್ಟೇ ಅಲ್ಲದೆ, ಬಹುರಾಷ್ಟ್ರೀಯ ಕಂಪೆನಿಗಳ ಅನುದಾನದಿಂದ ತಮ್ಮದೇ ರಚನೆಗಳನ್ನು ಸೃಷ್ಟಿಸಿಕೊಂಡು ಭಾರತದ ಮಹಿಳಾ ಚಳುವಳಿಯ ಗೊತ್ತುಗುರಿಗಳನ್ನು ನಿರ್ಧರಿಸುತ್ತಿರುವ ವಿದೇಶೀ ಅನುದಾನ ಪಡೆಯುವ ಮಹಿಳಾ ಸಂಘಟನೆಗಳ ಸ್ವರೂಪವನ್ನು ಖಂಡಿಸುತ್ತಲೇ, ದೇಶದ ಸಾರ್ವಭೌಮತ್ವವನ್ನು ರಕ್ಷಿಸಲು ಶ್ರಮಿಸುವುದು.

ಇಂದು ದೇಶದಲ್ಲಿ ಬಹಳ ಕಡೆ ರೂಪುಗೊಂಡಿರುವ ಸ್ವಾಯತ್ತ ಮಹಿಳಾ ಚಳುವಳಿಯನ್ನು ಎತ್ತಿ ಹಿಡಿಯುವ ಸಂಘಟನೆಗಳು ಈ ಮೇಲೆ ಹೇಳಿದ, ಚರಿತ್ರೆಯಲ್ಲಿ ದಾಖಲುಗೊಂಡ ಮಹಿಳೆಯರ ಅನುಭವಗಳನ್ನು ಅವೆಲ್ಲಾ ಪಿತೃಪ್ರಧಾನ ವ್ಯವಸ್ಥೆಯ ಪುರುಷಾಧಿಪತ್ಯದ ಸಂಚಿನಿಂದಲೇ ಆದ ಅನ್ಯಾಯಗಳೆಂಬ ದೃಷ್ಟಿಕೋನದಿಂದಲೇ ವಿಶ್ಲೇಷಿಸುವ, ವ್ಯಾಖ್ಯಾನಿಸುವ ಯತ್ನಗಳನ್ನು ನಡೆಸುತ್ತಾ ಬಂದಿದೆ. ನವ ವಸಾಹತುಶಾಹಿ ಆಕ್ರಮಣದ ಕಾರ್ಯತಂತ್ರದ ಭಾಗವಾಗಿ ಕೋಟ್ಯಾಂತರ ರೂಪಾಯಿಗಳ ಧನಸಹಾಯ ಪಡೆಯುವ ಸ್ವಯಂ ಸೇವಾ ಸಂಸ್ಥೆಗಳೂ ಈ ಸ್ವಾಯತ್ತ ಮಹಿಳಾ ಸಂಘಟನೆಗಳ ಭಾಗವಾಗಿದ್ದು ಅದೇ ಮೀಮಾಂಸೆಯನ್ನು ಹೇಳುವುದು ಕುತೂಹಲಕರವಾದ್ದು. ಅವು ಪಕ್ಷೇತರ ರಾಜಕೀಯ ರಚನೆಗಳನ್ನು (non-party political formations) ಬೆಂಬಲಿಸುತ್ತಾ ಪ್ರತ್ಯೇಕವಾಗಿ ದೇಶದ ರಾಜಕೀಯದಿಂದ ಜನಸಮುದಾಯವನ್ನು ದೂರ ಸರಿಸುವ, ನಿಷ್ಕ್ರಿಯಗೊಳಿಸುವ, ಇಲ್ಲವೇ ದಾರಿತಪ್ಪಿಸುವ ಮಾರ್ಗ ಅನುಸರಿಸುತ್ತಿರುವುದನ್ನು ಕಾಣಬಹುದಾಗಿದೆ. ಉದಾಹರಣೆಗೆ 'ವರದಕ್ಷಿಣೆ' ಪದ್ಧತಿಯನ್ನು ಕುರಿತ 'ಮಾನುಷಿ'ಯ ಧೋರಣೆ, ಸಮಾನ ನಾಗರಿಕ ಸಂಹಿತೆಯನ್ನು ಕುರಿತ ಸ್ವಾಯತ್ತ ಮಹಿಳಾ ಸಂಘಟನೆಗಳ ಧೋರಣೆಯನ್ನು ಇಲ್ಲಿ ಗಮನಿಸಬಹುದು.

'ಅಧಿಕಾರ' ಶಕ್ತಿ ರಾಜಕೀಯಕ್ಕೆ 'ಸ್ವಾಯತ್ತತೆ'ಯ ಹೋರಾಟದ ಪರಿಕಲ್ಪನೆ ಎಂದಿಗೂ ಪರ್ಯಾಯವಾಗಲಾರದು ಎಂಬುದರ ಬಗ್ಗೆ ಹೆಚ್ಚು ಮಹಿಳೆಯರ ಗಮನ ಸೆಳೆಯುವ, ಸಂಘಟಿಸುವ ಕಾರ್ಯ ಇಂದು ಆಗಬೇಕಿದೆ. ಆದ್ದರಿಂದಲೇ ಮಹಿಳೆಯರು ಹೆಚ್ಚು ಹೆಚ್ಚು ರಾಜಕೀಯ ಪ್ರಕ್ರಿಯೆಗೆ ಒಳಗೊಳ್ಳಬೇಕು ಮತ್ತು ಮಹಿಳಾ ಪ್ರಶ್ನೆ ರಾಜಕೀಯ ಪ್ರಶ್ನೆಯಾಗಬೇಕು.

– ಎನ್. ಗಾಯತ್ರಿ

# ಒಂದು ಅದ್ಭುತ ಹೋರಾಟದ ಸ್ಮರಣೆ

- ಡಾ || ಜಿ. ರಾಮಕೃಷ್ಣ

**ಗೋದಾವರಿ ಪರುಲೇಕರ್ ಠಾಣಾದ ವರ್ಲಿಗಳೆಂಬ ಆದಿವಾಸಿಗಳನ್ನು ಸಂಘಟಿಸಿ ಜಮೀನ್ದಾರಿಕೆಯ ಉಪಟಳಗಳ ವಿರುದ್ಧ ಏಕಾಕಿಯಾಗಿ ಸೆಣಸಿದ ಮಹತ್ವದ ಹೋರಾಟಗಾರ್ತಿ. 1945ರಲ್ಲಿ ಆಕೆ ನಡೆಸಿದ ಐತಿಹಾಸಿಕ ಹೋರಾಟಕ್ಕೆ ಇದೀಗ ಅರ್ಧ ಶತಮಾನ ಸಂದಿದೆ. ಗೋದಾವರಿ ತಾಯಿಯವರ ಅನನ್ಯ ವ್ಯಕ್ತಿತ್ವ, ನಿಷ್ಕಾಮವಂತ ಹೋರಾಟಗಳ ಉಜ್ವಲ ಚಿತ್ರವನ್ನು ಡಾ|| ಜಿ. ರಾಮಕೃಷ್ಣ ಅವರು ನೀಡಿದ್ದಾರೆ.**

1947ರ ಫೆಬ್ರವರಿ 6ರಂದು ಮಹಾರಾಷ್ಟ್ರದಲ್ಲಿರುವ ಠಾಣಾದ ಜಿಲ್ಲಾ ನ್ಯಾಯಾಧೀಶರ ಕೋರ್ಟಿನಲ್ಲಿ ಒಬ್ಬಾಕೆ ಹಾಜರಾಗಬೇಕೆಂದು ಸಮನ್ಸ್ ಹೊರಡಿಸಲಾಗಿತ್ತು. ಆ ಆಜ್ಞೆಯ ಪ್ರಕಾರ ಆಕೆ ಮುಂಬೈಯಿಂದ ಬಂದು ಕೋರ್ಟಿನಲ್ಲಿ ಹಾಜರಾದರು. ಆಕೆಯ ಮೇಲೆ ಹೊರಿಸಲಾಗಿದ್ದ ಆಪಾದನೆ ಕಿಚ್ಚೆಬ್ಬಿಸುವಂತಹ ಭಾಷಣಗಳನ್ನು ಮಾಡಿದ್ದಳು ಎಂಬುದಾಗಿತ್ತು. ವಿಚಾರಣೆಗೆ ಹಾಜರಾಗಲು ಆಕೆಗೆ ತೊಡಕೊಂದಿತ್ತು. ಅದೇನೆಂದರೆ ಇನ್ನೊಂದು ಆಜ್ಞೆಯ ಪ್ರಕಾರ ಆಕೆಯು ಠಾಣಾ ಜಿಲ್ಲೆಯನ್ನು ಪ್ರವೇಶಿಸುವಂತಿರಲಿಲ್ಲ. ದಹಾಣು, ಉಂಬರ್ಗಾಂವ್, ಮುಂತಾದೆಡೆಗಳಲ್ಲಿ ಆದಿವಾಸಿಗಳನ್ನು ಸಂಘಟಿಸಿ ಅಶಾಂತಿಯನ್ನುಂಟುಮಾಡಿದ್ದಳೆಂಬ ಕಾರಣಕ್ಕೆ ಆಕೆಯನ್ನು ಜಿಲ್ಲೆಯಿಂದ ಹೊರಹಾಕಲಾಗಿದ್ದಿತು. ತಾನು ಪ್ರವೇಶಿಸಬಾರದ ಠಾಣಾದಲ್ಲಿ ವಿಚಾರಣೆಗೆ ಹಾಜರಾಗಬೇಕೆಂಬ ಸಮನ್ಸ್ ಇದ್ದುದರಿಂದ ಆಕೆ ಕೋರ್ಟಿನಲ್ಲಿ ಹಾಜರಾದರು. ವಿಚಾರಣೆ ಮುಗಿದು ಆಕೆ ಹೊರಬಂದಾಗ ಪೊಲೀಸರು ಆಕೆಯನ್ನು ದಸ್ತಗಿರಿ ಮಾಡಿದರು. ಕಾರಣ : ಜಿಲ್ಲೆಯೊಳಗೆ ಬರಕೂಡದೆಂಬ ನಿಷೇಧಾಜ್ಞೆಯನ್ನು ಉಲ್ಲಂಘಿಸಿ ಆಕೆ ಠಾಣಾಕ್ಕೆ ಬಂದಿದ್ದಳು! ಇಂತಹ ವಿಚಿತ್ರವೆನಿಸಬಹುದಾದ ನ್ಯಾಯವು ದೊರೆತದ್ದು ಶ್ರೇಷ್ಠ ಹೋರಾಟಗಾರ್ತಿ ಗೋದಾವರಿ ಪರುಲೇಕರ್ ಅವರಿಗೆ. (ಅವರ ಹೆಸರು ಪರೂಳ್‌ಕರ್ ಎಂದಿರಬೇಕು. ಆದರೆ ಕನ್ನಡದಲ್ಲಿ ಈಗಾಗಲೇ ಅವರನ್ನು ಪರುಲೇಕರ್ ಎಂದು ಪರಿಚಯಿಸುವುದು ರೂಢಿಯಲ್ಲಿರುವುದರಿಂದ ಹೆಸರನ್ನು ಹಾಗೆಯೇ ಉಲ್ಲೇಖಿಸಲಾಗಿದೆ.) ಈ ಅಸಹ್ಯವಾದ ನ್ಯಾಯ ಆಕೆಗೆ ದೊರೆತದ್ದು ಬ್ರಿಟನ್ನಿನ ವಸಾಹತು ದೌರ್ಜನ್ಯ ಇನ್ನೂ ಜಾರಿಯಲ್ಲಿದ್ದಾಗಲೇ ಆದರೂ ಮುಂಬೈ ಪ್ರಾಂತ್ಯದಲ್ಲಿ ಆಗ್ಗೆ ಬಿ.ಜಿ. ಖೇರ್ ನೇತೃತ್ವದ ಸರ್ಕಾರ ಅಧಿಕಾರದಲ್ಲಿತ್ತು ಮತ್ತು ಮೊರಾರ್ಜಿ ದೇಸಾಯಿ ಗೃಹ ಸಚಿವರಾಗಿದ್ದರು. ಜನವರಿ 21ರಂದು ಪತ್ರಿಕಾ ಸಂದರ್ಶನದಲ್ಲಿ ಈ (ಕು)ಖ್ಯಾತ ಸಚಿವ ಹೇಳಿದ್ದ ಮಾತಿದು : "ಕಮ್ಯುನಿಸ್ಟರಿಂದ ಮೂಡಿಬರುವ ಯಾವುದೇ ಒಡಂಬಡಿಕೆಯೂ ನನಗೆ ಬೇಕಿಲ್ಲ. ಅವರಿಗೆ ಅನುಕೂಲವಾಗುವಂತಹ ಏನನ್ನೂ ನಾನು ಮಾನ್ಯ ಮಾಡಲಾರೆ."

ಒಂದು ಕಡೆ ರಾಜಕೀಯ ಸ್ವಾತಂತ್ರ್ಯಕ್ಕಾಗಿ ಹೋರಾಟ, ಇನ್ನೊಂದು ಕಡೆ ದೇಶದ ವಿಭಜನೆಗೆ ಒಪ್ಪಿಗೆ ಕೊಡಬೇಕೆ ಎಂಬುದರ ಗಹನ ಚರ್ಚೆ, ಮತ್ತೊಂದೆಡೆ ಸ್ವಾತಂತ್ರ್ಯಾನಂತರ ತಾವೆಲ್ಲಾ ಹೇಗೆ ಕಾರ್ಯಾಚರಣೆಗಳಲ್ಲಿ ತೊಡಗಿ ಶೋಷಣೆಯ ಫಲ ಕೈಬಿಟ್ಟುಹೋಗದಂತೆ ನೋಡಿಕೊಳ್ಳಬೇಕೆಂದು ಜಮೀನ್ದಾರರು ಲೆಕ್ಕಾಚಾರ ಮಾಡಿಕೊಳ್ಳುತ್ತಿದ್ದ ಸಂದರ್ಭ. ಇವೆಲ್ಲದರ ನಡುವೆಯೂ ದಟ್ಟದರಿದ್ರರಾಗಿ ಬಾಳುವೆ ನಡೆಸುತ್ತಿದ್ದ ಆದಿವಾಸಿಗಳು ಹೊಸ ಪ್ರಜ್ಞೆಯಿಂದ ಸಂಘಟಿತರಾದರೆ ಅದು ಹೀನಾಯವಾದುದೆಂದು ಭಾವಿಸಿ ಅವರನ್ನು ಸಂಘಟಿಸುತ್ತಿದ್ದವರ ಮುಂಚೂಣಿಯಲ್ಲಿದ್ದ ಗೋದಾತಾಯಿಯವರಿಗೆ ವೈಪರೀತ್ಯದ ಕಾನೂನಿನ ಸೇವೆ! ಬಂಡವಾಳಶಾಹಿ ವರ್ಗವು ವಸಾಹತು ಸರ್ಕಾರವನ್ನೂ ಮೀರಿಸುವಂತಹ ಕ್ರಮಗಳನ್ನು ಕೈಗೊಳ್ಳಲು ಸಿದ್ಧವಿದೆಯೆಂದು ಸೂಚಿಸುವಂತಹ ಅಕ್ರಮ ಇದಾಗಿತ್ತು. ಸ್ವಾತಂತ್ರ್ಯದ ನಂತರ ಮೊರಾರ್ಜಿಯ ಸಂತತಿಗೆ ಸೇರಿದ ಆಳುವ ವರ್ಗ ಏನೆಲ್ಲಾ ಅಕೃತ್ಯಗಳನ್ನು ಎಸಗಬಹುದೆಂಬುದನ್ನು ಗೋದ್ಾವರಿಯವರ ಮೇಲಿನ ಆಪಾದನೆ ಮತ್ತು ಕಾನೂನುಕ್ರಮಗಳಿಂದ ತೋರಿಸಿಕೊಡಲಾಗಿತ್ತು.

ಗೋದಾವರಿಯವರು ವರ್ಲಿಗಳೆಂಬ ಆದಿವಾಸಿಗಳ ನಡುವೆ ಕೆಲಸ ಆರಂಭಿಸಿದ್ದು 1945ರಲ್ಲಿ, ಅಂದರೆ ಐವತ್ತು ವರ್ಷಗಳ ಹಿಂದೆ. ಆ ಐತಿಹಾಸಿಕ ಹೋರಾಟವು ನಡೆದ ಅರ್ಧ ಶತಮಾನದ ನಂತರ ವರ್ಲಿಗಳ ಸ್ಥಿತಿಗತಿಗಳು ಸಾಕಷ್ಟು ಭಿನ್ನವಾಗಿವೆ. ಬೇರೆಷ್ಟೋ ಆದಿವಾಸಿ ಜನಾಂಗಗಳವರು ದೇಶದ ನಾನಾ ಭಾಗಗಳಲ್ಲಿ ಇಂದಿಗೂ ಕಾರ್ಪಣ್ಯದಲ್ಲಿ ಜೀವ ತೇಯುತ್ತಿದ್ದಾರೆ. ಅವರ ಜೀವನವಿಧಾನ ಇನ್ನೆಲ್ಲಿ ಬದಲಾಗಿಬಿಡುತ್ತದೋ ಎಂದು ಆತಂಕ ವ್ಯಕ್ತಪಡಿಸುವವರು ನಮ್ಮಲ್ಲಿ ಹೇರಳವಾಗಿದ್ದಾರೆ. ನಮ್ಮ ಸಮಾಜಶಾಸ್ತ್ರೀಯ ಅಧ್ಯಯನಗಳಿಗೆ ಅವರು ಹಾಗೇ ಉಳಿದಿರುವುದು ಬೇಕಾಗಿದೆಯೇನೋ! ಆದ್ದರಿಂದ ಆದಿವಾಸಿಗಳ ಸದ್ಯದ ಜೀವನವನ್ನು ವೈಭವೀಕರಿಸುವ ಪರಿಪಾಠ ಹೆಚ್ಚಾಗಿ ಕಾಣಬರುತ್ತಿದೆ. ಯಾವ ಅಭಿವೃದ್ಧಿ ಕಾರ್ಯಕ್ರಮವೂ ಅವರನ್ನು ಪಲ್ಲಟಗೊಳಿಸಬಾರದೆಂಬ ಉದ್ದೇಶದಿಂದ ಹಲವು

ಯೋಜನೆಗಳನ್ನು ವಿರೋಧ ಮಾಡುವ ಪ್ರಕ್ರಿಯೆಗಳಿಗೆ ನಮ್ಮಲ್ಲಿ ಕೊರತೆಯಿಲ್ಲ. ಗೋದಾವರಿಯವರ ಸಂದರ್ಭದಲ್ಲಿ ಇಂತಹ ಭಾವುಕತೆಗೆ ಸ್ವಲ್ಪವೂ ಸ್ಥಾನವಿರಲಿಲ್ಲ.

**ವರ್ಲಿ ಆದಿವಾಸಿಗಳ ಉಡುಪು, ಸಂಪ್ರದಾಯಗಳು, ಆಚಾರ-ವಿಚಾರಗಳು, ಅಂತಸ್ಸಂಬಂಧಗಳು, ಜೀವನದೃಷ್ಟಿ, ಎಲ್ಲಾ ಬದಲಾಗಿ ನಾಗರಿಕತೆಗೆ ಕೇವಲ ಕಂಭಗಳಾಗಿ ಶ್ರಮ ನೀಡುವುದರ ಬದಲು ನಾಗರಿಕತೆಯ ಹರಿಕಾರರು ಅವರಾಗಬೇಕೆಂಬುದು ಅಂದಿನ ಸಂಘಟನೆ ಮತ್ತು ಹೋರಾಟಗಳ ಉದ್ದೇಶವಾಗಿತ್ತು. ದಮನ ಕ್ಕೊಳಗಾಗಿದ್ದರೂ ಮಾರ್ದವತ್ತೆಯ ಸೊಗಸು ಅವರಲ್ಲಿ ಸಮೃದ್ಧವಾಗಿತ್ತೆಂದು ಹೇಳಿ ಆ ಜನರ ಕಷ್ಟದ ಜೀವನವನ್ನು ಹಾಗೇ ಮುಂದುವರಿಯುವಂತೆ ಬಿಡಲು ಗೋದಾತಾಯಿ ಮತ್ತು ಅವರ ಸಹಕಾರ್ಯಕರ್ತರು ಸಿದ್ಧರಿರಲಿಲ್ಲ. ಆದಿವಾಸಿಗಳ ಆರ್ಥಿಕ-ಸಾಮಾಜಿಕ ಜೀವನ ವ್ಯವಸ್ಥೆಯು ಬದಲಾಯಿಸಿದರೆ ಅವರ ಸಾಂಸ್ಕೃತಿಕ ಸ್ವಂತಿಕೆಯು ನಶಿಸಿಹೋಗುತ್ತದೆಂಬ ಸೋಗಿನ ತಿಳಿವಳಿಕೆ ಅವರ ದಾಗಿರಲಿಲ್ಲ. ಆ ತಥಾಕಥಿತ ಸ್ವಂತಿಕೆಯನ್ನು ಉಳಿಸುವುದಕ್ಕಾಗಿ ಅವರ ಅಸಹನೀಯ ಸ್ಥಿತಿಯನ್ನು ನೋಡಿಯೂ ನೋಡದಂತೆ ನಟಿಸಲು ಗೋದಾವರಿಯವರ ಹೃದಯವು ಕಾಠಿಣ್ಯವನ್ನು ತುಂಬಿಕೊಳ್ಳಲು ಸಮರ್ಥವಾಗಿರಲಿಲ್ಲ.**

ರೈತ ಸಂಘದ ಸಮ್ಮೇಳನವೊಂದು ತಿತ್ವಾಲಾ ಎಂಬಲ್ಲಿ ನಡೆಯುವುದಿತ್ತು. ಅದರ ಪೂರ್ವಭಾವಿ ಸಿದ್ಧತೆಗಾಗಿ ಠಾಣಾ ಜಿಲ್ಲೆಯ ದಹಾಣು ಮತ್ತು ತಾಲಸಾರಿ ಭಾಗಗಳಲ್ಲಿ ಗೋದಾವರಿಯವರು ಪ್ರವಾಸ ಮಾಡುತ್ತಿದ್ದರು. ಅದು 1945ರ ಆದಿಭಾಗ. ಆಗ ಆಕೆಗೆ ಮೊದಲಬಾರಿಗೆ ಪೂರ್ಣಪ್ರಮಾಣದಲ್ಲಿ ವರ್ಲಿ ಆದಿವಾಸಿಗಳ ಪರಿಚಯವಾಯಿತು. ಮಹಿಳೆಯರೂ ಸೇರಿದಂತೆ ಮಾನವ ಎಚ್ಚೆತ್ತಾಗ ಏನೆಲ್ಲಾ ಘಟಿಸಬಹುದೆಂಬ ಪ್ರಯೋಗಕ್ಕೆ ಅದು ನಾಂದಿಯಾಯಿತು.

ಆದಿವಾಸಿಗಳ ಜೀವನಕ್ರಿಯೆ ಕಠೋರವಾಗಿತ್ತು. ಬೆಳಗಿನ ಜಾವದಿಂದ ಸೂರ್ಯ ನೆತ್ತಿಗೆ ಬರುವತನಕ ದುಡಿತ. ಆಗ ಒಂದು ಪಡಿ ಭತ್ತ ಕೂಲಿಯಾಗಿ ಪಡೆದು ಹಟ್ಟಿಗೆ ಹೋಗಿ ಕುಟ್ಟಿಕೊಳ್ಳಬೇಕು. ಆಮೇಲೆ ಅದರಿಂದ ಅನ್ನ, ಗಂಜಿ. ಅದನ್ನು ಸ್ವಲ್ಪ ಉಪ್ಪಿನೊಡನೆ ಮಿದ್ದು ತಿಂದರೆ ದಿನದ ಭೋಗ ಮುಗಿಯಿತು. ಮತ್ತೆ ಮಧ್ಯಾಹ್ನದ ಕೆಲಸ. ಸಂಜೆಗೆ ಮತ್ತೆ ಕೂಲಿಯೇನೂ ದಕ್ಕುವಂತಿಲ್ಲ. ಸಹಿಷ್ಣುತೆಯೆಂದು ಶ್ಲಾಘಿಸಬಹುದು, ಅಥವಾ ಅಜ್ಞಾನದ ಕತ್ತಲಿನ ಬವಣೆ ಎನ್ನಬಹುದು, ಅಂತೂ ವರ್ಲಿ ಆದಿವಾಸಿಗಳು ಮೂಕಪಶುಗಳಂತೆ ದುಡಿದು ಸುಣ್ಣವಾಗಿದ್ದರು. ಕಣ್ಣಿನ ಅಂಚಿನಲ್ಲಿ ಕೋಪವೊಂದು ಅಡಗಿದ್ದಿರಬಹುದು. ಹೊರನೋಟಕ್ಕೆ ಅದು ಪ್ರಕಟವಾಗುವಂತಿರಲಿಲ್ಲ. ಕೇವಲ ಒಂದು ಶತಮಾನದ ಹಿಂದೆ ಆ ಪ್ರದೇಶದ ಭೂಮಿ ಆದಿವಾಸಿಗಳದ್ದೇ ಆಗಿತ್ತು. ಆದರೆ ಕ್ರಮೇಣ ಅದು ಅವರ ಕೈಬಿಟ್ಟುಹೋಗಿತ್ತು. ಸೆಪ್ಟೆಂಬರ್ 1939ರಲ್ಲಿ ಮಂತ್ರಿಯಾಗಿದ್ದ ಮೊರಾರ್ಜಿ ದೇಸಾಯಿ ಶಾಸನಸಭೆಯಲ್ಲಿ ಉಸುರಿದ್ದುದು ಹೀಗೆ : ''ಖಾಂದೇಶದ ಭಿಲ್ಲರು ಮತ್ತು ಠಾಣಾದ ವರ್ಲಿಗಳು ಈಚಿನವರೆಗೂ ಅವರ ಪ್ರದೇಶಗಳ ಭೂಮಿಯ ಒಡೆಯರಾಗಿದ್ದರು. ಯಾವುದೋ ಭೀಕರ ಕಾರಣಗಳಿಂದಾಗಿ ಎಕರೆಗೆ ಐದು ರೂಪಾಯಿಗಳಂತೆ ಜಮೀನನ್ನು ಕಳೆದುಕೊಂಡು ನಿರ್ಗತಿಕರಾಗಿದ್ದಾರೆ. ಅದಕ್ಕಿಂತಲೂ ಕಡಿಮೆ ಬೆಲೆಗೆ ಕೂಡ ಮಾರಿಕೊಂಡವರೂ ಉಂಟು.''

ಆಮೇಲೆ ಜಮೀನ್ದಾರರ ಉಪಟಳ ಆರಂಭವಾಯಿತು. ಆದಿವಾಸಿಗಳಿಗೆ ಬರಡು ಭೂಮಿಯೊಂದಷ್ಟನ್ನು ಕೊಡುವುದಾಗಿ ಹೇಳಿ ಒಂದು ಬುದ್ಧಿವಂತಿಕೆಯ ಒಪ್ಪಂದ ಮಾಡಿಕೊಂಡರು. 'ಕಬೂಲ್ಯಾತ್' ಎಂದು ಅದರ ಹೆಸರು. ಬೆಳೆಯ ಅಧಿಕ ಭಾಗವನ್ನು ಜಮೀನ್ದಾರನಿಗೆ ನೀಡಬೇಕು ಹಾಗೂ ಜಮೀನ್ದಾರನ ತೊತ್ತಾಗಿ ಅವನು ಹೇಳುವ ಕೆಲಸಗಳನ್ನೆಲ್ಲಾ ಮಾಡಬೇಕು. ಜಮೀನ್ದಾರನ ಭೂಮಿಯಲ್ಲಿ ಯಾವ ಕೂಲಿ-ನಾಲಿಯೂ ಇಲ್ಲದೆ ದುಡಿಯಬೇಕಾಗಿಬಂದದ್ದು ಈ ಒಪ್ಪಂದದ ಫಲ. ಈ ಪದ್ಧತಿಯು ಗುಲಾಮಗಿರಿಗೆ ಸಮವೆಂದು ಬ್ರಿಟಿಷ್ ಅಧಿಕಾರಿ ಸಿಮಿಂಗ್‌ಟನ್ ಒಂದು ವರದಿಯಲ್ಲಿ ಬರೆದಿದ್ದ. ಭೂಮಿಯಲ್ಲಿ ಗೇಯುವುದಲ್ಲದೆ ಕಾಡಿನ ಮರ ಕಡಿಯುವುದು, ಹುಲ್ಲು ಕುಯ್ಯುವುದು, ಸಂದೇಶಗಳನ್ನು ಹೊತ್ತು ಹತ್ತಾರು ಮೈಲಿ ಓಡುವುದು, ಹೀಗೆ ಅವರಿಗೆ ವಹಿಸದಿದ್ದ ಕೆಲಸಗಳೇ ಇರಲಿಲ್ಲ. 1940ರಲ್ಲಿ ಆದಿವಾಸಿ ಸೇವಾ ಮಂಡಲದ ಪರವಾಗಿ ಬಿ.ಜಿ.ಖೇರ್ ಹೇಳಿದ್ದುದು: ''ಮುಂಬೈಯಿಂದ ಕೇವಲ ಐವತ್ತು ಮೈಲಿ ದೂರದಾಚೆ ಇಷ್ಟೊಂದು ಜನ ಆದಿವಾಸಿಗಳು ಗುಲಾಮಗಿರಿಗಿಂತಲೂ ಕನಿಷ್ಠವಾಗಿ ಜೀವನ ನಡೆಸಬೇಕಾಗಿದೆ ಎಂಬುದು ನಾಚಿಕೆಗೇಡಿನ ವಿಷಯ''. ಹಾಗೆ ಹೇಳಿದ ಮಹಾಶಯ ಅದನ್ನು ತೊಡೆದುಹಾಕಲು ಏನನ್ನೂ ಮಾಡಲಿಲ್ಲ. ಗೋದಾವರಿಯವರಂತಹವರ ಮಾರ್ಗದರ್ಶನದಲ್ಲಿ ಅವರು ಬಂಡೆದ್ದಾಗ ''ಕಮ್ಯುನಿಸ್ಟರ ಪ್ರೇರಣೆಯಿಂದ ಈ ಆದಿವಾಸಿಗಳು ಹಿಂಸೆಯಲ್ಲಿ ತೊಡಗಿದ್ದಾರೆ'' ಎಂಬ ಆಕ್ಷೇಪವೆತ್ತಿ ಆದಿವಾಸಿ ನಾಯಕರನ್ನೆಲ್ಲಾ ಜೈಲಿಗೆ ತಳ್ಳಿದ! ಗಾಂಧೀಜಿಯವರ ಸಮೀಪವರ್ತಿ ನರಹರಿ ಪಾರಿಖ್ ಜನವರಿ 1947ರಲ್ಲಿ ಈ ದುಷ್ಟಕ್ರಮವನ್ನು ಪ್ರತಿಭಟಿಸಿ ಹೇಳಿದರು: ''ವರ್ಲಿಗಳ ಬಂಡಾಯವು ನಮ್ಮ ಕಣ್ಣು ತೆಗೆಸಬೇಕು. ಪೊಲೀಸ್ - ಮಿಲಿಟರಿ ಕಾರ್ಯಾಚರಣೆಯಿಂದ ಅದನ್ನು ಬಗ್ಗುಬಡಿಯುವುದು ಕೆಲಕಾಲ ಶಾಂತಿ ನೆಲೆಸೀತೆಂಬ ಭ್ರಮೆ ಉಂಟುಮಾಡಬಹುದು. ಆದರೆ ಒಳಗಿನ ರೋಗವು ಹಾಗೇ

ಉಳಿದಿದೆ. ವರ್ಲಿಗಳ ಬಂಡಾಯವು ಆ ಆಂತರಿಕ ರೋಗದ ಒಂದು ಹೊರಸೂಚನೆ, ಅಷ್ಟೆ. ರೋಗದ ಮೂಲಕಾರಣವನ್ನು ನಿವಾರಿಸದೆ ಹೊರಸೂಚನೆಗೆ ಔಷಧ ಕೊಡಲು ಮುಂದಾಗುವುದು ಮೂರ್ಖತನ.'' ಮುಂದುವರಿದು ಅವರೆಂದರು: ''ದಮನಕ್ಕೆ ಸಿಲುಕಿರುವ ವರ್ಲಿಗಳ ಚೈತನ್ಯವು ಹೊರಹೊಮ್ಮಿದೆ. ಅದರ ಮುಂದಿನ ಪ್ರಕ್ರಿಯೆಯನ್ನು ಯಾರೂ ತಡೆಯಲಾಗುವುದಿಲ್ಲ.''

ಚೈತನ್ಯವು ಹೊರಹೊಮ್ಮುವುದಕ್ಕೂ ಆಮೇಲೆ ಪ್ರಕ್ರಿಯೆ ಮುಂದುವರಿಯುವುದಕ್ಕೂ ಅವಿಶ್ರಾಂತವಾಗಿ ದುಡಿದ ನಿಷ್ಠಾವಂತ ಮಹಿಳಾರತ್ನವೆಂದರೆ ಗೋದಾತಾಯಿ. ಆಕೆ ವರ್ಲಿಗಳಿಗೆ ಮೊದಲು ಹೇಳಿದ್ದು ''ವೇಧಿ''ಯನ್ನು ಕೂಡಲೆ ನಿಲ್ಲಿಸಬೇಕು, ಎಂದು. ಜಮೀನ್ದಾರನಿಗಾಗಿ ಪುಕ್ಕಟೆಯಾಗಿ ದುಡಿಯಬೇಕಾಗಿದ್ದ ನಿರ್ಬಂಧಕ್ಕೆ ಆ ಹೆಸರಿತ್ತು. ವರ್ಲಿಗಳು ಅದನ್ನು ನಿಲ್ಲಿಸಲು ಮುಂದಾದದ್ದೇ ಸಾಕು ಜಮೀನ್ದಾರರ ಕ್ರೌರ್ಯವು ಬೆಂಕಿಯಂತೆ ಉರಿದೆದ್ದಿತು. ಗೋದಾವರಿಯವರು ಸಂಯೋಜಿಸಿದ ಮೊದಲ ಆದಿವಾಸಿಗಳ ಸಭೆಗೇ ಒಬ್ಬ 'ಭಯ್ಯಾ' ಬಂದ. ಅವನು ಭೂಮಾಲಿಕರ ಭಂಟ. ಅವನೊಟ್ಟಿಗೆ ಕಂದಾಯ ಇಲಾಖೆಯವನೂ ಒಬ್ಬನಿದ್ದ. ಸಭೆ ನಡೆಯಕೂಡದೆಂದು ಅವನ ಆಜ್ಞೆ! ಗೋದಾವರಿ ಅವನತ್ತ ಹಾಯ್ದು ಗುಡುಗಿದಾಗ ಆದಿವಾಸಿಗಳಿಗೆ ಎಲ್ಲಿಲ್ಲದ ಧೈರ್ಯ ತುಂಬಿಬಂತು. ಅಂದಿನಿಂದ ಆಕೆ ಅವರಿಗೆ 'ಗೋದಾತಾಯಿ' ಅಥವಾ ಕೇವಲ 'ಬಾಯಿ' ಆದರು. ಅವರೊಟ್ಟಿಗೆ ಈಕೆ ಹೇಗೆ ಬೆರೆತುಹೋದರೆಂಬುದನ್ನು ಆಗಿನ ಘಟನೆಗಳನ್ನೆಲ್ಲಾ ವೀರತ್ವ-ವೈರತ್ವಗಳ ಸೋಂಕು ತಗುಲದಂತೆ ಸರಳವಾಗಿ ಈಕೆಯೇ ನಿರೂಪಿಸಿರುವ ಪುಸ್ತಕದಲ್ಲಿ ಓದಿ ತಿಳಿಯಬೇಕು, ಆ ಗಾಢ ಅನುಭವವನ್ನು ನಮ್ಮದನ್ನಾಗಿಸಿಕೊಳ್ಳಬೇಕು. ('ಮಾನವ ಎಚ್ಚೆತ್ತಾಗ' ಎಂಬ ಹೆಸರಿನಲ್ಲಿ ಈ ಪುಸ್ತಕವು ಕನ್ನಡಕ್ಕೆ ಭಾಷಾಂತರಿಸಲಾಗಿದೆ).

ಅಕ್ಟೋಬರ್ 1945ರಲ್ಲಿ ಭಾರಿ ಜಮೀನ್ದಾರನೊಬ್ಬನ ಮನೆಗೆ ಹೋಗುವ ಪ್ರಸಂಗ ಆಕೆಗೆ ಬಂದಿತ್ತು. ಆದಿವಾಸಿಗಳು ಮುಷ್ಕರ ಹೂಡಿದ್ದರು, ಪೊಲೀಸರು ಗುಂಡು ಹಾರಿಸಿದ್ದರು ಮತ್ತು ಗೋದಾವರಿಯವರನ್ನು ಸಂಧಾನಕ್ಕೆ ಕರೆಸಲಾಗಿತ್ತು. ಸಾಂಜನ್ ಎಂಬ ಚಿಕ್ಕ ಪಟ್ಟಣದಲ್ಲಿದ್ದ ಆ ಭವ್ಯಬಂಗಲೆಯನ್ನು ನೋಡಿ ಗೋದಾವರಿ ಬೆರಗಾದರು; ಆ ಒಂದು ಬಂಗಲೆಯಡಿ ಸಾವಿರಾರು ಆದಿವಾಸಿ ಬುರುಡೆಗಳು ಬಿದ್ದಿರಬೇಕು ಎನಿಸಿತು ಅವರಿಗೆ. ಈ ಬಂಗಲೆಯ ಜನ ಪ್ರಕೃತಿಸೌಂದರ್ಯ, ಭೋಜನದ ವೈವಿಧ್ಯ, ಜಮೀನ್ದಾರನ ಸಾಂಸ್ಕೃತಿಕ ಅಭಿರುಚಿಗಳು, ಇತ್ಯಾದಿಗಳ ಬಗ್ಗೆ ಅವಿರತವಾಗಿ ಚರ್ಚೆ ನಡೆಸಿದ್ದರು. ಬಂಗಲೆಯ ಹೊರಗಿನ ಹಟ್ಟಿಗಳಲ್ಲಿ ಹಿಟ್ಟಿಲ್ಲದ ಮಕ್ಕಳು, ಮುದುಕರು, ಸೊರಗಿ ಸಾಯುತ್ತಿದ್ದರೆಂದು ಅವರಿಗೆ ಕಾಣಿಸುವುದಿಲ್ಲವಲ್ಲಾ ಎಂದು ಗೋದಾತಾಯಿ ಮರುಗಿದರು. ಈ ಬಂಗಲೆಯ ಮಾಲಿಕ ಇಡೀ ಪ್ರದೇಶಕ್ಕೆ ಅನಭಿಷಿಕ್ತ ರಾಜ. ಅವನಿಗೆ ಅಸಂಖ್ಯ ಮಹಿಳೆಯರೊಂದಿಗೆ ಸಂಸರ್ಗ. ಅವರಲ್ಲಿ ವರ್ಲಿ ಹೆಂಗಸರೂ ಸೇರಿದ್ದಾರೆ. ಸೇರದಿದ್ದರೆ ಅವರನ್ನು ಸಿಗಿದು ತೋರಣ ಕಟ್ಟುತ್ತಾನೆ, ಇಲ್ಲವೆ ಕಟ್ಟಿಸುತ್ತಾನೆ. ಅದಕ್ಕೆ ಅವನಿಗೆ ಪೊಲೀಸರ ಬೆಂಗಾವಲಿದೆ. ತಪ್ಪದೆ ಪ್ರತಿದಿನ ಸಂಜೆ ಎಂಟಕ್ಕೆ ಅವನು ಮಹಾತ್ಮಾ ಗಾಂಧಿಗೆ ಗೌರವ ತೋರಿಸಲು ತೆರಳುತ್ತಾನೆ! ಅವನ ಸಂಧ್ಯಾಭಾಷೆಯಲ್ಲಿ ಹಾಗೆಂದರೆ ಮಾದಕಪಾನೀಯದ ಸೇವನೆ ಎಂದರ್ಥ!! ಇವನಂತೆ ಕ್ರಿಮಿಗಳಾಗಿ ಜೀವಿಸುವ ಜಮೀನ್ದಾರರ ದರ್ಪ, ಕುಚೋದ್ಯ, ಚಾರಿತ್ರ್ಯಗಳನ್ನು ಕಂಡು ಗೋದಾತಾಯಿಗೆ ಹೊಟ್ಟೆ ತೊಳೆಸಿಬಂತು.

ವರ್ಲಿಗಳಾದರೋ ಅಲ್ಲಿ-ಇಲ್ಲಿ ಸಿಗುವ ಬೇರು-ನಾರು ತಿಂದು ಬದುಕಬೇಕು, ಈ ಕ್ರಿಮಿಗಳಿಗಾಗಿ ದುಡಿಯಬೇಕು, ಅವರಿಂದ ಛಡಿ ಏಟು ತಿನ್ನಬೇಕು, ಗುಡಿಸಿಲುಗಳನ್ನು ಸುಡಿಸಿಕೊಳ್ಳಬೇಕು, ಶಿಕ್ಷೆಯ ರೂಪದಲ್ಲಿ ಆಗಾಗ್ಗೆ ಮರಕ್ಕೆ ತಲೆಕೆಳಗಾಗಿ ಜೋತ ಹಾಕಿಸಿಕೊಂಡು ಕೆಳಗಿನಿಂದ ಬರುತ್ತಿದ್ದ ಮೆಣಸಿನಕಾಯಿಯ ಘಾಟುಹೊಗೆ ಕುಡಿಯಬೇಕು, ಚರ್ಮ ಸುಲಿಸಿಕೊಳ್ಳಬೇಕು!

ಉಂಬರ್ಗಾಂವ್ ತಾಲ್ಲೂಕಿನ ಬಾರ್ದಿ ಎಂಬಲ್ಲಿ ಒಬ್ಬ ಭೂಮಾಲಿಕ ಬಕಾಸುರನಿದ್ದ. ಅವನು ಕಬ್ಬಿಣದ ಸಲಾಕೆಯೊಂದನ್ನು ಪ್ರತಿನಿತ್ಯ ಒಂದೊಂದು ಗುಡಿಸಿಲ ಮುಂದೆ ಇರಿಸುತ್ತಿದ್ದ. ಅಂದರೆ, ಆ ಗುಡಿಸಿಲಿನ ಇಡೀ ಕುಟುಂಬ ಅಂದು ಅವನಿಗಾಗಿ ಕೂಲಿ ಇಲ್ಲದೆ ದುಡಿಯಬೇಕು, ಎಂದರ್ಥ. ಗೋದಾತಾಯಿ ಒಮ್ಮೆ ಒಂದು ಗುಡಿಸಿಲಿನಲ್ಲಿ ತಂಗಲೆಂದು ಹೋದಾಗ ಅಲ್ಲಿ ಕಬ್ಬಿಣದ ಸಲಾಕಿ ಇತ್ತು. ಮನೆಯ ಮುದುಕ ಮತ್ತು ಮಗ ಖಿನ್ನರಾಗಿ ಕುಳಿತಿದ್ದರು. ಆಗಲೆ ಕತ್ತಲಾಗುತ್ತಾ ಬಂದಿತ್ತು. ಮುದುಕಿ ಎಲ್ಲೋ ಮೂಲೆಯಲ್ಲಿ ಮುದುರಿಕೊಂಡಿದ್ದಳು. ಆಕೆಗೆ ಜ್ವರ. ಆದ್ದರಿಂದ ದುಡಿಯಲು ಹೋಗಿರಲಿಲ್ಲ. ಏನು ಪರಿಣಾಮ ಕಾದಿದೆಯೋ ಎಂದು ತವಕದಿಂದ ಕುಳಿತಿದ್ದರು ಮುದುಕ ಮತ್ತು ಮಗ. ಸ್ವಲ್ಪ ಹೊತ್ತಿಗೆ ಧಣಿಯ ಭಂಟ ಬಂದು ಕೂಗಾಡಿದ, ಮುದುಕಿಯನ್ನು ಎಳೆದಾಡಿದ, ಗುದ್ದಿದ, ಹೊರದಬ್ಬಿದ, ಮಡಕೆ-ಕುಡಿಕೆಗಳನ್ನು ಒಡೆದು ಚೂರುಚೂರು ಮಾಡಿದ. ಕಡೆಗೆ ಅವಳನ್ನು ಧಣಿಯ ಬಳಿಗೆ ಎಳೆದೊಯ್ದು ಅವನ ಮುಂದೆ ಚಚ್ಚಿದ. ವರ್ಲಿಗಳೆಲ್ಲಾ ಇದನ್ನು ಮೂಕರಾಗಿ ನೋಡಿ ಕಂಪಿಸುತ್ತಿದ್ದಾರೆ.

''ನಾಳೆಯಿಂದ ಯಾರೂ ಪುಕ್ಕಟೆ ದುಡಿಯುವುದಿಲ್ಲವೆಂದು ಹೇಳಿ, ಕಬ್ಬಿಣದ ಸಲಾಕೆಯನ್ನು ಅವನ ಮನೆ ಮುಂದೆ ಎಸೆದು ಬನ್ನಿ'' ಎಂದರು ಗೋದಾತಾಯಿ. ಹಳೆಯ ಕತೆಗಳನ್ನೆಲ್ಲಾ ಕೇಳಿ ತಿಳಿದರು. ಯಾರೋ ಹುಡುಗ ಒಂದು ಮಾವಿನಕಾಯಿ ಕಿತ್ತು ತಿಂದ, ಅವನ ಮೂಳೆ ಮುರಿಯುವಷ್ಟು ಬಡಿತ ತಿಂದ; ಇನ್ನೊಬ್ಬ ಧಣಿಗೆ ಏನೋ ಪ್ರತಿ ಹೇಳಿದ, ದಿನವಿಡೀ ತಲೆಯ ಕೂದಲನ್ನು ಕಾಲ್ಬೆರಳಿಗೆ

ಕಟ್ಟಿಸಿಕೊಂಡು ಬಿದ್ದಿದ್ದ, ಸಂಜೆಗೆ ಛಡಿಯ ರುಚಿ ಕಂಡ; ಇನ್ನೊಬ್ಬಳು ಹೆಂಗಸು, ಐದು ದಿನಗಳ ಕೂಸಿನ ತಾಯಿ, ಕೆಲಸಕ್ಕೆ ಹೋಗಿರಲಿಲ್ಲ, ಧಣಿ ಬಂದು ಅವಳ ಬೆನ್ನ ಮೇಲೆ ಬಾರಿಸಿದ, ಐದು ದಿನಗಳ ಕೂಸು ಆಕೆಯ ತೋಳಿನಲ್ಲೇ ಇದೆ; ಮತ್ತೊಬ್ಬ, ಅವನ ಹೆಸರು ಜೇತು, ಸಿಡುಬು ತಗುಲಿದೆ, ಕೆಲಸಕ್ಕೆ ಹೋಗಿಲ್ಲ, ಧಣಿ ಬಂದು ಎಳೆದುಕೊಂಡು ಹೋದ, ನೇಗಿಲು ಕಟ್ಟಿದ ನೊಗದ ಒಂದು ಕಡೆ ಎತ್ತಿನ ಬದಲಾಗಿ ಇವನೇ ಎತ್ತು; ಇನ್ನೊಬ್ಬ, ಜಿಪ್ಪರ್ ಎಂದು ಅವನ ಹೆಸರು, ಕೆಸರುಗದ್ದೆಯಲ್ಲಿ ಕೆಲಸ ಮಾಡುವಾಗ ನೀರು ಕುಡಿಯಲೆಂದು ಒಂದು ನಿಮಿಷ ಹೊರಬಂದ, ಧಣಿ ಬಂದು ಈಟಿಯಿಂದ ತಿವಿದು ರಕ್ತ ಸೋರಿಸಿದ. – ಹೀಗೆ ನೂರಾರು ಕತೆಗಳು. ಪೊಲೀಸರೇನು ಮಾಡುತ್ತಿದ್ದರು, ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸುತ್ತಿದ್ದ ಕಾಂಗ್ರೆಸ್ಸಿನ ಮುಂದಾಳುಗಳು ಏನು ಮಾಡುತ್ತಿದ್ದರು? –ಗೋದಾತಾಯಿಗೆ ದಿಗ್ಭ್ರಮೆ: ಇಬ್ಬರೂ ಧಣಿಯ ಮನೆಯ ಪಡಸಾಲೆಯಲ್ಲಿ ಔತಣ ಸ್ವೀಕರಿಸುತ್ತಿದ್ದಾರೆ!

ಇಂತಹ ಹಿನ್ನೆಲೆಯಲ್ಲಿ ಕಂಗಾಲಾಗದೆ ವರ್ಲಿಗಳನ್ನು ಹೋರಾಟಕ್ಕೆ ಅಣಿಗೊಳಿಸಿದ ಮಹಾತಾಯಿ ಗೋದಾತಾಯಿ. ಆಕೆ ಸಹಿಸಿದ ಕಿರುಕುಳಗಳನ್ನು ಪಟ್ಟಿಮಾಡಲು ಸಾಧ್ಯವಿಲ್ಲ. ಯಾವುದೋ ಊರಿಗೆ ಹೋದರೆ ತಂಗಲು ಸ್ಥಳ ಕೊಡಲು ಜನರು ಹಿಂದೆಗೆಯುತ್ತಾರೆ, ಸ್ನಾನಕ್ಕಿರಲಿ ಕುಡಿಯಲು ಸಹ ನೀರು ದುರ್ಲಭವಾಗುವಂತೆ ಧಣಿಗಳ ಏಜೆಂಟರು ನೋಡಿಕೊಳ್ಳುತ್ತಾರೆ. ದಾರಿಯಲ್ಲಿ ಛೇಡಿಸುವವರು ಲೆಕ್ಕವಿಲ್ಲ. ಜೊತೆಗೆ ಆಕೆ ದಸ್ತಗಿರಿಯಾದಾಗಲೆಲ್ಲ ಆದಿವಾಸಿಗಳನ್ನು ಹಂಗಿಸುವುದು. ಕೋರ್ಟಿಗೆ ಹೋದರೆ ವಕೀಲರು ಯಾರೂ ಇವರ ಪರ ವಾದ ಮಾಡುವಂತಿಲ್ಲ, ಮುಂಬೈಯಿಂದ ವಕೀಲನು ಬಂದು ಒಂದು ಕೊಠಡಿ ಬಾಡಿಗೆಗೆ ಹಿಡಿದರೆ ಅಲ್ಲಿಂದ ಅವನ ಉಚ್ಚಾಟನೆ, – ಹೀಗೆ **1945**ರಲ್ಲಿ ಆಕೆ ಅನುಭವಿಸದ ಅಹಿತಕರ ಸನ್ನಿವೇಶ ಯಾವುದೂ ಇಲ್ಲ. ಎಷ್ಟೋ ವೇಳೆ ಒಂದು ಮರದಡಿ, ಅಥವಾ ಬಟ್ಟಬಯಲಿನಲ್ಲಿ ಒಬ್ಬರೇ ಕೂತು ರಾತ್ರಿ ಕಳೆಯಬೇಕಾಗುತ್ತಿತ್ತು. ಇದಾವುದೂ ಅವರನ್ನು ಧೃತಿಗೆಡಿಸಲಿಲ್ಲ. ವರ್ಲಿಗಳೊಡನೆ ಸಂಪೂರ್ಣವಾಗಿ ಏಕೀಭವಿಸಿಕೊಂಡಿದ್ದ ಈ ತಾಯಿಗೆ ಸಮನಾದ ಇನ್ನೊಬ್ಬ ಚಳುವಳಿಕಾರ ಅಥವಾ ಚಳುವಳಿಕಾರ್ತಿ ಕಳೆದ ಐವತ್ತು ವರ್ಷಗಳಲ್ಲಿ ಎಷ್ಟು ಮಂದಿ ಆಗಿಬಂದಿದ್ದಾರೆ? ಭೂಮಾಲಿಕರಿಗೆ ಭೂತ ಬಿಡಿಸುವ ತನಕ ಹಿಮ್ಮೆಟ್ಟದೆ ಹೋರಾಡಿ ಯಶಸ್ಸು ಗಳಿಸಿ ಕೆಂಬಾವುಟವನ್ನು ಎತ್ತಿ ಹಿಡಿದ ಆಕೆ ಪ್ರಫುಲ್ಲವದನೆ, ತೇಜಸ್ಸಿನ ಪ್ರತೀಕ. ಅಂತೆಯೇ ಎಚ್ಚೆತ್ತ ಮಾನವರಾಗಿ ಕಣ್ತೆರೆದು ಕಂಗೊಳಿಸಿದ ವರ್ಲಿಗಳು ನಮಗೆ ಮಾರ್ಗದರ್ಶಕರು, ವಿಮೋಚನೆಯ ಹೋರಾಟದ ವೀರರು, ಸಮಾಜವಾದದ ಪತಾಕೆಯನ್ನು ಹಾರಿಸಿದವರು. ವಿವಿಧರಂಗಗಳ ಇಂದಿನ ಹೋರಾಟಗಳಿಗೆ ವರ್ಲಿ ಆದಿವಾಸಿಗಳ ಐವತ್ತು ವರ್ಷಗಳ ಹಿಂದಿನ ಅದ್ಭುತ ಹೋರಾಟವು ಒಂದು ದಾರಿದೀಪ.

★ ★ ★ ★

# ಕಾವ್ಯ ಸಂಚಯ

## ಅನನ್ಯ ಭೂಮಿ

ಉರಿವ ಸೂರ್ಯ
ಶಕ್ತಿ ಮೂಲವೆಂದು ಎಲ್ಲ ಹೇಳುತ್ತಾರೆ
ಸೂರ್ಯನಿಂದಲೇ ಬೆಳಕು ಬಿಸಿಲು ಸುಗ್ಗಿ
ಸೂರ್ಯನಿಂದಲೇ ಎಲ್ಲ ಎಲ್ಲ.
ಈ ಬೆಳಕು ಈ ಬಿಸಿಲು
ಬುವಿಯ ತಾವರೆಯನರಳಿಸುವ
ನೀಲಲೋಹಿತ ಜಾಲ
ಎಲ್ಲ ಸೂರ್ಯನದೇ ದೇಣಿಗೆ.

ಇದೆಲ್ಲ ಸತ್ಯವೇ ಸರಿ
ಆದರೆ
ಸೂರ್ಯ ತೇಜದಸಾಧ್ಯ ಪ್ರೀತಿ
ತಾಳಲಾರದೆ ಓಡಿ ಹೋದಳು ಮಡದಿ
ನೆರಳ ನಿಲಿಸಿ ಗೊತ್ತೆ ನಿಮಗೆ.

ಈ ಅನಂತ ವಿಶ್ವದಲ್ಲಿ
ಸೂರ್ಯನೊಬ್ಬನೇ ಏನು
ಅನಂತ ಸೂರ್ಯರಿದ್ದಾರೆ
ಆದರೆ ಭೂಮಿ
ಇರುವುದೊಂದೇ

ಸೂರ್ಯನುಗುಳುವ ವಿಷವ
ತನ್ನ ಗಾಳಿಸೆರಗಿನಲಿ ಸೋಸಿ
ಜೀವ ಸಂಕುಲಕೆ ಹಾಲೆರೆವ
ಬಣ್ಣವಿಲ್ಲದ ಸೂರ್ಯನ ಬೆಳಕಿಗೆ
ಕಾಮನಬಿಲ್ಲಿನೇಳು ಬಣ್ಣ ತರುವ
ಗಂಧವತೀ ಜೀವಪಾಲಿನಿ
ಗಾಳಿ ನೀರಿನಮೃತವರ್ಷಿಣಿ
ಇಳಾ

ಒಬ್ಬಳೇ
ನೀನೊಬ್ಬಳೇ
ಕ್ಷಮಿಸು ಸೂರ್ಯ
ನಿನ್ನೊಳಗನಂತ ಶಕ್ತಿಯಿದೆ
ಮೊಳೆವ ಬೀಜಗಳನದು ಸುಟ್ಟುಹಾಕದ ಹಾಗೆ
ಗಾಳಿ ಸೆರಗ ಮುಚ್ಚಿ
ತೇಜೋ ಬಿಂದು
ಮೊಗ್ಗಾಗಿ ಹೂವಾಗಿ
ರೂಪಿಸಿತಾವ ತಾಯೊಡಲೆ ಭೂಮಿ
ಅಹಂಕಾರ ನಿನ್ನದು ಗೆಲವು ಅವಳದು

– ಸ. ಉಷಾ

## ನನ್ನೊಳಗೇ ನನಗೊಬ್ಬ ಗುರು

ಅಂದು ಕುಡಿದಾಗ,
ತಲೆ ದಿಮ್ಮೆಂದು, ಹೊಟ್ಟೆ ಕಳವಳಿಸಿ
ಯಾವ ನೆನಪೋ ಗೊತ್ತಿಲ್ಲ
ಗಂಡ ಹೊಡೆದದ್ದೋ
ಅಪ್ಪ ಮನೆ ಹೊರಗೆ ಕಾಲಿಡಬೇಡವೆಂದಿದ್ದೋ
ಅನಿಷ್ಟದ ಗಂಡು ಕೈ ಹಿಡಿದು ಎಳೆದದ್ದೋ
ಯಾವ ನೆನಪೋ ಗೊತ್ತಿಲ್ಲ
ಹೃದಯ ಹಿಂಡಿದಂತಾಗಿ, ಕಣ್ಣೀರು ತುಂಬಿ
ಹೆಪ್ಪಾದ ದುಃಖವೆಲ್ಲ
ವಕವಕನೆ ವಾಂತಿಯಾಗಿ
ಅಂಗಾತ ಬಿದ್ದುಕೊಂಡಿದ್ದೆ.

ಆನಂತರ,
ನಶೆಯೇ ಬೇಡವೆಂದು
ಸದಾ ಎಚ್ಚರವೇ ಇರಲೆಂದು
ಪಾನವಿರೋಧಿಯಾಗಿ ಸಾಗಿದ್ದೆ
ತಿರುವುದಾರಿಗಳಲ್ಲಿ.

ಆಗ,
ಮನದೊಳಗೆ, ಹೊಟ್ಟೆಯೊಳಗೆ, ಹೃದಯ–ತಲೆಯೊಳಗೆ
ಅಂಗಾಂಗವೆಲ್ಲ ನೋವಿನ ಮಡುಗಟ್ಟಿದ ಲೇಪ
ಕಿತ್ತೆಸೆದು ಬತ್ತಲಾಗಬೇಕೆಂಬ ತುಡಿತ.
ಮೊನ್ನೆ, ಮೊನ್ನೆಯೊಂದು ದಿನ,
ಗೆಳೆಯನೊಬ್ಬನ ಒತ್ತಾಯಕ್ಕೆ,
ಆರಂಭಿಸಿದ್ದೆ ಕುಡಿತ
ಪೆಗ್ಗಿನ ಮೇಲೆ ಪೆಗ್ಗು ಬಿದ್ದಾಗ
ಎಗ್ಗಿಲ್ಲದ ಸಂತೋಷ
ನೋವಿನ ರೋಮಾಂಚನ
ದುಃಖದ ಹೊಸಕಾವ್ಯ
ನನ್ನೊಳಗೆಲ್ಲ ಕಣ್ಣಂಚಿನ
ಒಂದೇ ಹನಿಯಾಗಿ
ಆದರ್ಶದ, ಆಸೆಯ, ಪ್ರೀತಿಯ
ಹೊಚ್ಚ ಹೊಸ ಹೊನಲು
ಮಾತಾಗಿ ಹರಿದಿತ್ತು
ನಡುವೆ ಮೌನ ಮಿಡಿದಿತ್ತು
ನನ್ನೊಳಗೇ ನನಗೊಬ್ಬ ಗುರುವಾಗಿ
ಧುತ್ತೆಂದು ಜೀವ ತಳೆದಿತ್ತು.

–ಎಸ್. ಮಾಲತಿ

## ತೊಂಬತ್ತೆರಡರ ಮುತ್ತಜ್ಜಿಯ ಹರಕೆ

ನನ್ನ ಒಲವಿನ
ಕುಡಿಯ ಕುಡಿಯ ಕುಡಿಯೇ
ಹೇಗೆ ಹಾಡಾಗಿಸಲೇ
ಮನದಾಳದ ಮಾತುಗಳನ್ನು

ಕಾಲಚಕ್ರ ಉರುಳಿ ಈ ದಶಕ ಕಳೆದು
ಹಿಂದೆ ಸರಿದಾಗ ಶತಮಾನ
ಮುಗಿಸಿ ದೀರ್ಘ ಜೀವಮಾನ
ಹೋಗಿರುತ್ತೇನೆ ನಾನು ದೂರ ನಿನ್ನಿಂದ ಬಲುದೂರ

ಮುತ್ತಜ್ಜಿ ಅಜ್ಜಿ ಅವ್ವ
ಮಗಳು ಮೊಮ್ಮಗಳು
ಹರಿವ ಜೀವನದಿಯಲ್ಲಿ
ತೆರೆಯ ಮೇಲೆ ತೆರೆಗಳು

ಬಾನಿನಷ್ಟಿದೆ ನೋವಿನ ಕಪ್ಪು
ಈ ಸುಕ್ಕು ಬಿಳಿ ಹುಬ್ಬು ಮಡಿ ಸೆರಗುಗಳ ಹಿಂದೆ
ಮಿಂಚಿಸಿದ್ದೇನೆ ಆದರೂ ಆಗಾಗ
ಸಂತಸದ ಕೆಲವು ಸೆಳಕು

ಗೆದ್ದು ಒಂದು ಸಲ
ಬಿದ್ದಿರಬಹುದು ಹನ್ನೊಂದು ಸಲ
ಆದರೂ ಬಳಲದೆ ಬಾಳ ಹೊಳೆಯಲ್ಲಿ
ಈಸಿದ್ದೇನೆ ಇದ್ದು ಜೈಸಿದ್ದೇನೆ

ಜೀವದ ಮೂಲ ಚೇತನದ ಚಿಲುಮೆ
ಕಂದ ಈ ನಿನ್ನ ಚಂದದ ಮುಖವು

ತುಟಿಯ ಛಲ ಹಣೆಯ ವಿಶ್ವಾಸ
ಹೊರಳಿಗಳ ಧೈರ್ಯ ಬೊಗಸೆಗಂಗಳ
ಆಸೆ ಉತ್ಸಾಹ ಕುತೂಹಲ
ಹುಸಿ ಹೋಗದಿರಲಿ ಹೊಳೆಯಲ್ಲಿ
ತೊಳೆದ ಹುಣಿಸೆಯಾಗದಿರಲಿ

ಹೆಣ್ಣು ನೀನು ಹೆಜ್ಜೆ ಹೆಜ್ಜೆಗೂ
ಸಮಾಜದ ನೂರು ಸೂಕ್ಷ್ಮ ರೀತಿ ರಿವಾಜು
ಹೀರಿ ಹುರುಪು ಚಿವುಟಿ ಯತ್ನದ ಚಿಗುರು
ಮಾಡಲೆಳಸುತ್ತವೆ ನಿನ್ನ ಅಬಲೆಯಾಗಿ

ಸೋಲುಗಳು ಸಾಲು ಸಾಲು
ಕಾಲು ಎಳೆಯಲು ಬಂದರೂ
ಬತ್ತಗೊಡಬೇಡ ಒಡಲಾಳದ ಒರತೆ
ಆರಗೊಡಬೇಡ ಎದೆಯಾಳದ ಹಣತೆ

ಮೊಳೆಯಗೊಡದ ನೆಲದಲ್ಲಿ
ಬೆಳೆಯಗೊಡದ ಗಾಳಿಯಲ್ಲಿ
ಗಟ್ಟಿಯಾಗಿ ಒಳಗೆ ನೀನು
ಹಸಿರು ಹೂ ಹಣ್ಣು ನೆರಳು
ಕೊಡುವ ಹೆಮ್ಮರವಾಗು

ನನ್ನ ಈ ಬಾಳು ಕಂದ
ಒಂದು ದೊಡ್ಡ ಹಾಡು
ನಿನ್ನದಾಗಲಿ ಸುಂದರ
ಸಾರ್ಥಕ ಮಹಾಕಾವ್ಯ

– ಡಾ. ಸಂಜೀವ ಕುಲಕರ್ಣಿ

## ನನ್ನ ಅಮ್ಮನ ಸೀರೆ

ನನ್ನ ಅಮ್ಮನ ಸೀರೆ
ಮರದ ಪೆಟ್ಟಿಗೆಯೊಳಗೆ
ಮಲ್ಲು ಬಿಳಿ ಸುತ್ತಲ್ಲಿ ಜಿರಲೆಗುಳಿಗೆ

ಮಡಿಕೆ ಮಡಿಕೆಯ ಶಿಸ್ತು
ಅಂಗೈಯ ಒತ್ತು
ತಲೆದಿಂಬಿನಡಿ ಇಡಿಯ ಇಸ್ತ್ರಿ ಪ್ರಪಂಚ
ಕರ್ಪೂರ ಪುಡಿಕೆ ಅಗರು ಲಾವಂಚ
ಅವಳದೇ ಪರಿಮಳ
ನನ್ನ ಅಮ್ಮನ ಸೀರೆ
ಜೊತೆಗೆ ಕೈ ಬಳೆ ಸದ್ದು ಸೇರಿದಂತೆ
ಸೊಂಟ ಸಿಕ್ಕಿಸಿ ದುಡಿವ ಹುರುಪಿನಂತೆ
ದೊಡ್ಡ ಸೆರಗಿನ ತುಂಬ
ಅಡ್ಡಡ್ಡ ರೇಖೆಗಳು
ದುಷ್ಟತನ ಹತ್ತಿರವೂ ಸುಳಿಯದಂತೆ
ನೆಟ್ಟ ಬದುಕಿನ ಕಟ್ಟೆ ಒಡೆಯದಂತೆ
ತಂಟೆ ಮಕ್ಕಳ ಎದುರು ಬೆತ್ತದಂತೆ

ನನ್ನ ಅಮ್ಮನ ಸೀರೆ
ನೆರಿಗೆ ಅಂಬಡೆಗಂಟು
ಖಾಲಿಯಾಗದ ಗೂಢ ಪದಾರ್ಥಕೋಶ
ಮಧುರ ಸೀರೆಯ ಹಸಿರು
ಹಳದಿ ಅಂಚಿನ ಹೂವು
ಅರಸಿ ಅಮ್ಮನ ಹಾಗೇ
ಇದ್ದಿರಬಹುದು - ಬಹುಶಃ
ನನ್ನ ಅಮ್ಮನ ಸೀರೆ
ಉಟ್ಟಷ್ಟೂ ಉಂಟು
ಎಷ್ಟುದ್ದ ಉದ್ದ ಉದ್ದ

ಒಮ್ಮೆ ಅಳೆಯಲು ಹೋಗಿ
ಒಮ್ಮೆ ಉಡಲೂ ಹೋಗಿ
ನಾನಾದೆ ಗಿಡ್ಡ ಗಿಡ್ಡ

ನನ್ನ ಅಮ್ಮನ ಸೀರೆ
ಒಡಲೆಲ್ಲ ನಕ್ಷತ್ರ
ಮೋಡದಲಿ ಬಿಸಿಲಿನಲಿ
ನೋಯದಂತಡಗಿ
ಮಾಯದಂತೆ ಕಾದು ಸ್ವಂತತನವ
ಕತ್ತಲಲ್ಲಿಯೇ ಹೊಳೆದ ಜೀವ

ನನ್ನ ಅಮ್ಮನ ಸೀರೆ
ವ್ಯಾಲು - ಮಗ್ಗದ ನೂಲು
ಪಟ್ಟೆಸೀರೆಗೆ ಪಟ್ಟ ಪುಟ್ಟ ಕನಸು
ನನಸಾಗುವಾಗ ಅಪ್ಪಯ್ಯನಿಲ್ಲ !
ಉಟ್ಟರೂ ಈಗಿಲ್ಲ
ಉಡುವ ಮನಸು
ಕಳೆದು ಹೋಯ್ತೆನ್ನುವಳು ಉಡುವ ವಯಸೂ
ನನ್ನ ಅಮ್ಮನ ಹಳೆಯ
ಉಡುಪಿ ನೇಯ್ಗೆಯ ಸೀರೆ
ನೋಡುತಿದೆ ನೋಡು ನೇಲೆಯ ಮೇಲೆ ಕುಳಿತು !
ಹಾಸಿಕೊಳ್ಳುವೆ ಅದನು
ಹೊದೆದುಕೊಳ್ಳುವೆ ಅದನು
'ಅಮ್ಮ' ಎನ್ನುವ ಸುಖದ
ನಿಟ್ಟುಸಿರ ಕರೆದು
ಸವೆದೂ ಸವೆಯದ ಆ
ಪದವ ನೆನೆದು
ಪದವ ನೆನೆದು

- ವೈದೇಹಿ



### ಬಹುಮಾನ

ತೊಂಬತ್ತೆಂಟು ಡಬ್ಬಗಳಿವೆ ಈ ಸೀಮೆ
ಎಣ್ಣೆ ಕ್ಯಾನಲ್ಲಿ ಬಿಳಿ ಹಸಿರು ಹಳದಿ ಕಂದು
ಅವುಗಳ ಮೈತುಂಬ ಮಸಿ ಸಿಬಿರು
ಬೆಮರು ಬೆರಳಿನ ಗುರುತು ಮಾಸಿದ ಲಂಗದ
ನೂಲಿನಂಚಿನ ಗಾಳಿ, ಒಡಕು ಬಳೆಗಳ
ನಿನಾದ ಹೂವು.

ಈ ಡಬ್ಬಿಗಳ ಡೊಂಕು ರೈಲು
ಹಠಾತ್ತನೆ ಚಲಿಸತೊಡಗಿತೋ ನೋಡಿ
ಎಲ್ಲ ಶಾಲೆಗಳ ಸ್ಟಾಫ್‌ರೂಮಿನಲ್ಲಿಟ್ಟ
ಗ್ಲೋಬುಗಳು ಗಹಗಹಿಸಿ ನಗಲಾರಂಭಿಸಿವೆ
ಅವು ಎನೌನ್ಸ್ ಮಾಡ್ತಿವೆ ಈ
ರೇಷನ್ ಕಾರ್ಡಿನ ಚಿತ್ತು ಬೆವರು ಬ್ರಹ್ಮಲಿಪಿ
ಬಿಡಿಸಿ ಓದಿದವರಿಗೆ ಬಹುಮಾನ
ಬೇಡದೆ ಬಂದ ಹೆಸರಿಲ್ಲದ
ಒಂದು ಶಿಶುವಿನ
ತಾಜಾ ಬಹುಮಾನ

– ಜಯಂತ ಕಾಯ್ಕಿಣಿ

### ತಿರುಗಿನಿಂತ ಪ್ರಶ್ನೆ

ಅಪ್ಪ, ಜನಕ ಕಲಿಸಿದ್ದ ಅಕ್ಷರವಿತ್ತು
ಸಾಕವ್ವೆಯರು ಹೇಳಿಕೊಟ್ಟ ಹಾಡಮಟ್ಟಿತ್ತು
ಸುತ್ತಮುತ್ತ ತಾಡಪತ್ರ ಚೆಲ್ಲಿತ್ತು
ಯಾಕೆ ಸುಮ್ಮನೆ ಕುಳಿತೆ ಸೀತೆ ನೀನು?

ಅಶೋಕದ ನೆರಳಿತ್ತು
ನಿನ್ನ ತುಂಬ ಶೋಕವಿತ್ತು
ಕೈ ತುಂಬ ಬಿಡುವಿತ್ತು
ಇನ್ನೇನು ಬೇಕಿತ್ತು?
ಯಾಕೆ ಸುಮ್ಮನೆ ಕುಳಿತೆ ಸೀತೆ ನೀನು?

ಆಮೇಲೂ ಬಿಡುವಿತ್ತು
ಲವಕುಶರು ಬೆಳೆದು
ಆಶ್ರಮ ಪ್ರಶಾಂತವಾಗಿತ್ತು
ನಿನ್ನೆದುರು ಹರಿದುಹೋದ
ಇಡೀ ಜೀವನವಿತ್ತು
ಯಾಕೆ ಸುಮ್ಮನೆ ಕುಳಿತೆ ಸೀತೆ ನೀನು?

ನನ್ನ ಪ್ರಶ್ನೆಗಳಿಗೆಲ್ಲ
ಅವಳ ಭೂಮಿತೂಕದ ಮೌನ.
ಕತ್ತೆತ್ತಿ ನೋಡಿದರೂ
ಅವಳ ಕಣ್ಣಭಾವಗಳು
ಶಬ್ದವಾಗದೆ ನನ್ನ ಕಣ್ಣೆಗಿಳಿದು
ತಿರುಗಿನಿಂತವು ಕೇಳಿದ್ದ ಪ್ರಶ್ನೆಗಳು.

– ಡಾ|| ವಿಜಯಾ ದಬ್ಬೆ

## ಸಂವಾದ

ನಮ್ಮ ದೇಶದ ಸಂವಿಧಾನದಲ್ಲಿ ಸಮಾನ ನಾಗರಿಕ ಸಂಹಿತೆ ಇರಬೇಕೆಂದು ನಿರ್ದೇಶನ ತತ್ವಗಳಲ್ಲಿ ಹೇಳಿದೆ. ಸಂವಿಧಾನದ ಪರಿಚ್ಛೇದ 44, 'ಏಕರೂಪ ನಾಗರಿಕ ಸಂಹಿತೆ' ಯ ಅಗತ್ಯವನ್ನು ಒತ್ತಿ ಹೇಳಿದೆ. ಇಂತಹದೊಂದು ಸಂಹಿತೆಯ ಅಗತ್ಯಕ್ಕಾಗಿ ಸ್ವಾತಂತ್ರ್ಯ ಬಂದ ದಿನದಿಂದಲೂ ಮಹಿಳಾ ಸಂಘಟನೆಗಳು, ಪ್ರಗತಿಪರರು ಒಂದಲ್ಲ ಒಂದು ರೀತಿಯಲ್ಲಿ ವಾದಿಸುತ್ತಲೇ ಬಂದಿದ್ದಾರೆ. ಆದರೆ ಈ ವರ್ಷ ಸುಪ್ರೀಂ ಕೋರ್ಟು ಎರಡನೇ ಮದುವೆಯಾಗಲೆಂದೇ ಮುಸ್ಲಿಂ ಧರ್ಮಕ್ಕೆ ಮತಾಂತರಗೊಳ್ಳುವ ಹಿಂದೂ ಗಂಡಂದಿರ ವರ್ತನೆಯನ್ನು ಟೀಕಿಸಿ ತೀರ್ಪು ನೀಡುವಾಗ ಭಾರತದಾದ್ಯಂತ ಒಂದು ಸಮಾನ ನಾಗರಿಕ ಸಂಹಿತೆ ರೂಪಿಸಲು ಪ್ರಯತ್ನಿಸಬೇಕೆಂಬ ಸಂವಿಧಾನದ 44ನೇ ಕಲಮಿಗೆ ಕೇಂದ್ರ ಸರ್ಕಾರದ ಕಾನೂನು ಇಲಾಖೆ ತೆಗೆದುಕೊಂಡಿರುವ ಕ್ರಮವೇನೆಂಬುದನ್ನು ಪ್ರಶ್ನಿಸಿದ ನಂತರ ಈ ವಿಷಯ ಬಿಸಿ ಬಿಸಿ ಚರ್ಚೆಗೆ ಕಾರಣವಾಗಿದೆ; ವಿವಿಧ ರಾಜಕೀಯ ಪಕ್ಷಗಳು ತಮ್ಮ ವಿಭಿನ್ನ ಧೋರಣೆಗಳನ್ನು ಹೊರ ಹಾಕುತ್ತಿದ್ದಾರೆ. ಜನಮತ ಮೂಡಿಸಬಲ್ಲ ಸಮಾಜದ ವಿವಿಧ ರಂಗದ ಪ್ರತಿಷ್ಠಿತರು ತಮ್ಮ ಅನಿಸಿಕೆಗಳನ್ನು ಚರ್ಚಿಸುತ್ತಿದ್ದಾರೆ. ಸಕಾಲಿಕವಾಗಿ ಅನಿವಾರ್ಯವಾಗಿ ಚರ್ಚೆಗೊಳಗಾಗಬೇಕಾದ ಈ ವಿಷಯವನ್ನು ಕುರಿತು 'ಅಚಲ' ವಿವಿಧ ರಾಜಕೀಯ ಪಕ್ಷಗಳ ಮುಖಂಡರನ್ನು, ವೃತ್ತಿಪರ ಧುರೀಣರನ್ನು ಸಂದರ್ಶಿಸಿದಾಗ ಮೂಡಿಬಂದ ಅಭಿಪ್ರಾಯಗಳು ಇಲ್ಲಿವೆ.

### ಸಂದರ್ಶಿತರನ್ನು 'ಅಚಲ' ಕೇಳಿದ ಪ್ರಶ್ನೆಗಳು

1. ನಿಮ್ಮ ದೃಷ್ಟಿಯಲ್ಲಿ 'ಸಮಾನ ನಾಗರಿಕ ಸಂಹಿತೆ'ಯ ಪರಿಕಲ್ಪನೆಯೇನು? ಅದು ಅಗತ್ಯವೇ?
2. ಹಾಗಿದ್ದಲ್ಲಿ ಪ್ರಸ್ತುತ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಸಂದರ್ಭದಲ್ಲಿ ನಿಮ್ಮ ಪರಿಕಲ್ಪನೆಯ 'ಸಮಾನ ನಾಗರಿಕ ಸಂಹಿತೆ'ಯನ್ನು ಜಾರಿಗೆ ತರಲು ನಿಮ್ಮ ಸಲಹೆಗಳೇನು?
3. ಸಮಾನ ನಾಗರಿಕ ಸಂಹಿತೆಯ ಹೆಸರಿನಲ್ಲಿ ಒಂದು ಧರ್ಮದ ಭಾವನೆಗಳನ್ನು ಇತರರ ಮೇಲೆ ಹೊರಿಸುವ ಪ್ರಯತ್ನ ಮಾಡಲಾಗುತ್ತಿದೆ ಎಂಬ ಆರೋಪವಿದೆ. ಈ ಬಗ್ಗೆ ನಿಮ್ಮ ಅಭಿಪ್ರಾಯವೇನು?

ಸಂವಾದ

## ಜನತೆಗೆ ಉಪಯುಕ್ತವಾಗಬಲ್ಲ ಕಾನೂನು ಬೇಕು

ಹಾರ್ನಹಳ್ಳಿ ರಾಮಸ್ವಾಮಿ, ಮಾಜಿ ಕಾನೂನು ಸಚಿವರು ಮತ್ತು ಕಾಂಗ್ರೆಸ್ (ಐ) ಧುರೀಣರು

1. ನಮ್ಮ ಸಂವಿಧಾನದಲ್ಲಿ ಸಮಾನ ನಾಗರಿಕ ಸಂಹಿತೆ ಇರಬೇಕೆಂದು ನಿರ್ದೇಶನ ತತ್ವಗಳಲ್ಲಿ ಹೇಳಿದೆ. ಹಾಗೆ ತೀರ್ಮಾನ ಮಾಡುವಾಗ ಸಂವಿಧಾನ ಸಭೆಯಲ್ಲಿ ಹಿರಿಯರು, ತತ್ವವೇತ್ತರು, ಶಾಸನ ಮತ್ತು ಸಮಾಜದ ಬಗ್ಗೆ ಪರಿಣತರು ಇದ್ದರು. ಅವರೆಲ್ಲಾ ಆಳವಾಗಿ ಯೋಚನೆ ಮಾಡಿ ಕೈಗೊಂಡ ತೀರ್ಮಾನ ಇದು. ಭಾರತದಲ್ಲಿ ಸಮಾನತೆಯಿಂದ ಕೂಡಿದ, ಸಮಾನಸ್ತರದಲ್ಲಿರುವ ಜನ ಇಲ್ಲ. ಆರ್ಥಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಸ್ವಲ್ಪ ವ್ಯತ್ಯಾಸ ಇರುವ ಜನ ಇಲ್ಲಿದ್ದಾರೆ. ಅದನ್ನು ಗಮನದಲ್ಲಿರಿಸಿ ನಿಧಾನವಾಗಿ ಸಮಾನ ನಾಗರಿಕ ಸಂಹಿತೆ ವಿಕಾಸವಾಗುವಂತೆ ಮಾಡಬೇಕೆಂಬುದು ಅವರ ಉದ್ದೇಶವಾಗಿತ್ತು. ನಮ್ಮ ಚರಿತ್ರೆ ನೋಡಿದರೆ ಪರಸ್ಪರ ವಿಭಿನ್ನವಾದ ಆಚಾರ-ವಿಚಾರಗಳನ್ನಿರಿಸಿಕೊಂಡಿದ್ದವರು ನಮ್ಮಲ್ಲಿ ಯಾವಾಗಲೂ ಇದ್ದರೆಂಬುದು ತಿಳಿಯುತ್ತದೆ. ಇದರಿಂದಾಗಿ ಎಷ್ಟೋ ಬಾರಿ ಸ್ವಾರ್ಥದ ಕಡೆ ಹೋಗುವುದು, ಭಾವನಾತ್ಮಕವಾಗಿ ಪ್ರತಿಕ್ರಿಯಿಸುವುದು ಕಾಣುತ್ತದೆ. ಇದರಿಂದ ಐಕ್ಯಕ್ಕೆ, ಸಮಗ್ರತೆಗೆ, ಭದ್ರತೆಗೆ ಧಕ್ಕೆ ಉಂಟಾಗುತ್ತದೇನೋ ಎಂಬ ಭಯವಿದೆ. ಅದು ಸಂವಿಧಾನ ಕರ್ತರಿಗೆ ತಿಳಿದಿತ್ತು. ಆದ್ದರಿಂದ ಸಮಾನ ಸಂಹಿತೆಯ ನಿಯಮಗಳ ರಚನೆಯ ಅಗತ್ಯವಿತ್ತೆಂದು ಅವರು ಮನಗಂಡರು. ಜಿನ್ನಾ ಜಾತಿಯ ಆಧಾರದ ಮೇಲೆ ಪ್ರತ್ಯೇಕ ರಾಷ್ಟ್ರ ಬೇಕೆಂದು ಒತ್ತಾಯಿಸಿದ್ದುದು ಎಲ್ಲರಿಗೂ ತಿಳಿದಿದೆ. ಆದರೆ ಪಾಕಿಸ್ತಾನದಲ್ಲಿ ಹಾಗೆ ರಾಷ್ಟ್ರೀಯತೆ ಉಳಿದಿಲ್ಲ. ಭಾರತದಿಂದ ಹೋದವರನ್ನು ಪರಕೀಯರೆಂದು ಕಾಣುತ್ತಿರುವುದು ಅಲ್ಲಿ ಸಂಘರ್ಷಕ್ಕೆ ಕಾರಣವಾಗಿದೆ. ಇಂತಹ ಪರಿಸ್ಥಿತಿ ಏಕಧರ್ಮೀಯವಾದ ಇನ್ನೂ ಅನೇಕ ದೇಶಗಳಲ್ಲಿದೆ. ಜಾತಿ, ಮತ, ಪಂಥ, ಭಾಷೆ, ಇತ್ಯಾದಿ ಭಿನ್ನತೆಗಳ ನಡುವೆಯೂ ಭಾರತದಲ್ಲಿ ಒಗ್ಗೂಡುವಿಕೆಯ ಅವಶ್ಯಕತೆ ಇದೆ. ಅದಕ್ಕೆ ನಡೆ-ನುಡಿಗಳಲ್ಲಿ ಒಂದು ರೀತಿಯ ವ್ಯವಹಾರ ಬೇಕು. ಆದ್ದರಿಂದ ತಾತ್ವಿಕವಾಗಿ ಭಾರತದಲ್ಲಿ ಸಮಾನ ನಾಗರಿಕ ಸಂಹಿತೆಯನ್ನು ಒಪ್ಪಬಹುದು. ಎರಡನೆಯದಾಗಿ, ಇದು ರಾಜಕೀಯಕ್ಕೆ ವಸ್ತುವಾಗಬಾರದು, ರಾಜಕೀಯ ಪಕ್ಷಗಳು ಇದನ್ನು ಚುನಾವಣೆಯ ತಂತ್ರವನ್ನಾಗಿ ಬಳಸಬಾರದು. ಹಾಗೆ ಮಾಡಿದರೆ ವಿನಾ ಕಾರಣ ಸಂಶಯ, ವಿರೋಧ ಮನೆಮಾಡಿಕೊಳ್ಳುತ್ತವೆ. ಆದ್ದರಿಂದ ಎಲ್ಲ ಧರ್ಮಗಳ ವಿಚಾರವಂತರು ಯೋಚನೆ ಮಾಡಿ ಬಗೆಹರಿಸಬೇಕಾದ ಸಮಸ್ಯೆ ಇದು. ಅಲ್ಪಸಂಖ್ಯಾತರ ಪೈಕಿ ಕೂಡ ಕೆಲವು ವಿಚಾರವಂತರು ಹೀಗೆ ಸಮಾನ ಸಂಹಿತೆಯ ಅಗತ್ಯವನ್ನು ಒತ್ತಿ ಹೇಳಿದ್ದಾರೆ. ಮೂರನೆಯದಾಗಿ, ಬೇರೆ ಧರ್ಮದವರೆಂದರೆ ಅವರೆಲ್ಲಾ ಬೇರೆ ಜನಾಂಗದವರೇನೂ ಅಲ್ಲ. ನಾವೆಲ್ಲಾ ಭಾರತೀಯರೇ. ಬೇರೆ ಧರ್ಮಗಳಿಗೆ ಹಿಂದೆ ಹಲವು ತಲೆಮಾರುಗಳಲ್ಲಿ ಸೇರ್ಪಡೆ ಹೊಂದಿದ್ದವರು ಮೂಲತಃ ನಮ್ಮ ಜನಾಂಗದವರೇ ಆಗಿದ್ದಾರೆ. ಯಾವುದೇ ಐತಿಹಾಸಿಕ ಕಾರಣಗಳಿಂದ ಹೀಗೆ ಮತಾಂತರ ಹೊಂದಿದ್ದರೂ ಮೂಲಭೂತವಾಗಿ ಜಾತಿ ಬದಲಾವಣೆಯಿಂದ ಜನಾಂಗದ ಬದಲಾವಣೆ ಉಂಟಾಗುವುದಿಲ್ಲ. ಹಲವು ಅಲ್ಪಸಂಖ್ಯಾತರಲ್ಲಿ ಇಂದಿಗೂ ಹಳೆಯ ನಮ್ಮ ಸಂಪ್ರದಾಯಗಳೇ ಕಾಣಸಿಗುತ್ತವೆ.

ಆದರೆ ಸಮಾನ ನಾಗರಿಕ ಸಂಹಿತೆಯನ್ನು ಮಾಡುವಾಗ ಅಲ್ಪಸ್ವಲ್ಪ ಬದಲಾವಣೆಗಳಾದರೂ ಚಿಂತೆಯಿಲ್ಲ. ಉದಾಹರಣೆಗೆ, ಮುಸಲ್ಮಾನರ ವೈಯಕ್ತಿಕ ಕಾನೂನಾದ ಶರಿಯತ್ತಿನ ಕೆಲವು ಭಾಗಗಳನ್ನು ಹಾಗೆಯೇ ಉಳಿಸಿಕೊಳ್ಳಬಹುದು. ಇಂತಹ ವಿಷಯಗಳನ್ನೆಲ್ಲಾ ದೊಡ್ಡದು ಮಾಡಬಾರದು. ಎಲ್ಲರ ಮನಸ್ಸನ್ನೂ ಒಲಿಸಿಕೊಂಡು ಮುಂದುವರಿಯುವುದು ಸೂಕ್ತವೆಂದು ನನ್ನ ಭಾವನೆ.

2. ರಾಜಕೀಯದಿಂದ ಹೊರಗಿಟ್ಟು ಇದನ್ನು ವಿಮರ್ಶೆ ಮಾಡಬೇಕು. ಚರ್ಚೆ ಮಾಡಬೇಕು. ಪರಸ್ಪರ ವಿರೋಧ ಪಂಗಡದವರೆನ್ನಬಹುದಾದ ಮಂದಿ ಒಟ್ಟಿಗೆ ಕಲೆತು ಪೂರ್ವಾಗ್ರಹಗಳನ್ನು ಕೈಬಿಟ್ಟು ಪ್ರತಿಯೊಂದು ಅಂಶದ ಸಾಧಕ-ಬಾಧಕಗಳನ್ನು ಪರೀಕ್ಷಿಸಬೇಕು. ಯಾವ ಧರ್ಮದ ಯಾವ ಅಂಶವು ಆಚರಣೆಯಲ್ಲಿ ಒಳ್ಳೆಯದನ್ನು ಮಾಡಿದೆಯೆಂಬುದು ಮುಖ್ಯ ಸಂಗತಿ. ಮುಸಲ್ಮಾನರ ಯಾವುದಾದರೂ ಒಳ್ಳೆಯ ಪದ್ಧತಿಯನ್ನು ಹಿಂದೂಗಳು ಅಳವಡಿಸಿಕೊಂಡರೆ ತಪ್ಪೇನೂ ಇಲ್ಲ. ಹಿಂದೂಗಳು ಮನುಧರ್ಮ ಶಾಸ್ತ್ರವನ್ನು ಯಾವಾಗಲೂ ಅಂತಿಮವಾದ ಮಾತೆಂದು ಪರಿಗಣಿಸಿಲ್ಲ. ಹಿಂದೂಗಳ ಕಾನೂನು ಹಲವಾರು ಬದಲಾವಣೆಗಳನ್ನು ಕಾಣುತ್ತಾ ಬಂದಿದೆ. ಆದ್ದರಿಂದ ದೇಶದ ಜನರಿಗೆ ಯಾವುದು ಉಪಯುಕ್ತವೋ ಮತ್ತು ಅನುಕೂಲವೋ ಅದು ಕಾನೂನಾಗಬೇಕು. ಜೀವನ ಸಹನೀಯವಾಗಬೇಕಾದದ್ದು ಮುಖ್ಯ. ಇಷ್ಟಕ್ಕೂ ಕಾನೂನು ಎಂದರೇನು? Law is the regulation of human conduct, ಅಷ್ಟೇ. ಅದನ್ನೇ ಧರ್ಮ ಎನ್ನುವುದು (ಧಾರಯತೀತಿ ಧರ್ಮಃ).



ಸಂವಾದ

ಸಂವಾದ

ಕಾನೂನು ಜೀವನ ವಿಧಾನಕ್ಕೆ ಪೂರಕವಾಗಿರುವಂಥದು. ವಸ್ತುನಿಷ್ಠವಾಗಿ, ಪರಸ್ಪರ ನಂಬಿಕೆಯಿಂದ ಈ ಸಮಾನ ಸಂಹಿತೆಯು ಜಾರಿಗೆ ಬರಬೇಕು. ಅಂದರೆ, ಎಲ್ಲಾ ಜನಗಳನ್ನೂ ಒಪ್ಪಿಸಿಯೇ ಮುಂದುವರಿಯಬೇಕೆಂದು ಇದರರ್ಥವಲ್ಲ. ಸಾಮಾನ್ಯವಾಗಿ ಒಪ್ಪಿಗೆಯಾಗುವ ತೀರ್ಮಾನ ಅದಾಗಿರಬೇಕು, ಅಷ್ಟೆ. ಮೂಲಭೂತವಾದಿಗಳು (ಅವರು ಹಿಂದೂಗಳಿರಲಿ, ಮುಸಲ್ಮಾನರಿರಲಿ, ಕ್ರೈಸ್ತರಿರಲಿ) ಮುಂದಿಡುವ ವಾದಗಳಿಗೆಲ್ಲಾ ಬೆಲೆ ಇರಬಾರದು. ಎಲ್ಲ ಧರ್ಮೀಯರಲ್ಲೂ ಪ್ರಜ್ಞಾವಂತರಿದ್ದಾರೆ, ವಸ್ತುನಿಷ್ಠವಾಗಿ ಯೋಚಿಸುವವರಿದ್ದಾರೆ, ಇಡೀ ಸಮಾಜದ ಹಿತದ ಬಗ್ಗೆ ಕಲ್ಪನೆ ಇರಿಸಿಕೊಂಡಿರುವವರಿದ್ದಾರೆ. ಅಂತಹವರೆಲ್ಲರ ಅಭಿಪ್ರಾಯಗಳನ್ನು ಪಡೆದು ಸಂಹಿತೆಯನ್ನು ರೂಪಿಸಬೇಕು. ಇದು ಎಂದಾದರೂ ಮಾಡಲೇ ಬೇಕಾದ ಕೆಲಸ. ಅದನ್ನು ಮಾಡದಿದ್ದರೆ ದೇಶಕ್ಕೆ ತೊಂದರೆ ಉಂಟಾಗುವ ಸಾಧ್ಯತೆ ಇದೆ.

3. ಸಮಾನ ನಾಗರಿಕ ಸಂಹಿತೆ ಮಾಡುವಾಗ ಒಂದು ಧರ್ಮದ ಪದ್ಧತಿಯನ್ನು ಇನ್ನೊಂದರ ಮೇಲೆ ಹೊರಿಸಲಾಗುತ್ತದೆ ಎಂಬುದು ತಪ್ಪು. ಹಿಂದೂಗಳಿಗೆ ಅನ್ವಯವಾಗುವಂತಹ ಕಾನೂನು ಏನಿದೆಯೋ ಅದು ಯಾವಾಗಲೂ ಹಾಗೇ ಇದ್ದುದಲ್ಲ. ಕಾಲದಿಂದ ಕಾಲಕ್ಕೆ ಅದು ಬದಲಾಗುತ್ತಾ ಬಂದಿದೆ. ಹೆಣ್ಣುಮಕ್ಕಳ ಹಕ್ಕು, ಬಹುಪತ್ನಿತ್ವ, ಬಹುಪತಿತ್ವ, ಇತ್ಯಾದಿಗಳಲ್ಲಿ ದೇಶ-ಕಾಲ-ಪರಿಸ್ಥಿತಿಗನುಗುಣವಾಗಿ ಬದಲಾವಣೆಗಳಾಗಿವೆ. ಬದಲಾವಣೆಯೇ ಮುಖ್ಯ ಗುರಿಯಾಗಿರುವಾಗ ಧರ್ಮದಿಂದ ಅಡಚಣೆ ಎಂಬ ಮಾತು ಬರುವುದಿಲ್ಲ. ಜಾತಿ ಹೆಸರಿನಲ್ಲಿ ಘರ್ಷಣೆ ಉಂಟಾಗಬಹುದಾದರೂ ಮೂಲಾರ್ಥದಲ್ಲಿ ಧರ್ಮವು ಅಂತಹ ವೈರುಧ್ಯ ಸೃಷ್ಟಿಸುವುದಿಲ್ಲ. ಹೆಣ್ಣುಮಕ್ಕಳಿಗೆ ಆಸ್ತಿಯ ಹಕ್ಕು ಇರಬೇಕೆಂಬ ಪ್ರಶ್ನೆ ಬಂತು ಎಂದಿಟ್ಟುಕೊಳ್ಳೋಣ. ಇದಕ್ಕೆ ಧರ್ಮ ಏಕೆ ಅಡ್ಡಿ ಬರಬೇಕು? ಮನುಷ್ಯಧರ್ಮ ಮುಖ್ಯವೇ ಹೊರತು ಬೇರಾವುದೂ ಅಲ್ಲ. ಒಬ್ಬ ಗಂಡಸಿಗೆ ಒಬ್ಬರಿಗಿಂತಲೂ ಹೆಚ್ಚು ಪತ್ನಿಯರಿರಬಾರದು ಎಂಬ ಪ್ರಶ್ನೆ ನೋಡಿ. ಅದು ಮನುಷ್ಯ ಧರ್ಮವಾಗಬೇಕೇ ವಿನಾ ಹಿಂದೂ ಧರ್ಮದ ಸೂತ್ರವಾಗಿ ಉಳಿಯಬಾರದು. ಯಾವುದೋ ಕಾಲದಲ್ಲಿ ಬೇರೊಂದು ಪದ್ಧತಿ ಇತ್ತೆಂಬುದು ನಿಜವಾದರೂ ಅದೇ ಪದ್ಧತಿ ಈಗಲೂ ಜಾರಿಯಾಗಬೇಕೆಂಬ ನಿಯಮವೇನೂ ಇಲ್ಲ. ಬದಲಾದ ಪರಿಸ್ಥಿತಿಯಲ್ಲಿ ಪದ್ಧತಿಗಳೂ ಬದಲಾಗುತ್ತವೆ. ಹಿಂದಿನ ಕಾಲವನ್ನು ನೋಡಿದರೆ ಅಲ್ಲಿ ಒಳ್ಳೆಯದೂ ಇದೆ, ಕೆಟ್ಟದ್ದೂ ಇದೆ; ಇಂದಿನ ಪ್ರಜ್ಞಾವಂತ ಸಮಾಜ ಜಾಗತಿಕ ದೃಷ್ಟಿಕೋಣದಿಂದ ಎಲ್ಲವನ್ನೂ ನಿಗದಿಗೊಳಿಸಿಕೊಳ್ಳಬೇಕು. ಆದ್ದರಿಂದ ಸಮಾನ ನಾಗರಿಕ ಸಂಹಿತೆಯೆಂಬುದು ಯಾರೂ ಯಾರ ಮೇಲೂ ಭಾರ ಹೊರಿಸಿದಂತೆ ಎನ್ನಲು ಸಾಧ್ಯವಿಲ್ಲ. ಪ್ರತಿಯೊಬ್ಬರಿಗೂ ಒಪ್ಪಿಗೆಯಾಗುವಂತಹ ಪದ್ಧತಿ ಬರಬೇಕು. ಅದನ್ನು ಕೇವಲ ರಾಜಕೀಯದ ಅಥವಾ ವೋಟಿನ ದೃಷ್ಟಿಯಿಂದ ಮಾಡಲಾಗುವುದಿಲ್ಲ. ಮೂಢನಂಬಿಕೆಗಳಿಗೆ ತುತ್ತಾಗಿರುವ ಜನರಿಂದಲೂ ಇದನ್ನು ಮಾಡಲಾಗದು. ಮೊದಲೇ ಹೇಳಿದಂತೆ, ಎಲ್ಲ ಧರ್ಮಗಳಲ್ಲೂ ಇರುವ ವಿಚಾರವಂತರು ಇದರತ್ತ ಗಮನ ನೀಡಬೇಕು. ಬಲವಂತದಿಂದ ಇದನ್ನು ಮಾಡಹೊರಡಬಾರದು.

★ ★ ★ ★



ಸಂವಾದ

ಸಂವಾದ

# "ಸಮಾನ ನ್ಯಾಯ : ಅನ್ಯಾಯ ಶೋಷಣೆಗಳಿಗೆ ವಿದಾಯ"

ಎಸ್. ಸುರೇಶ್‌ಕುಮಾರ್, ಶಾಸಕರು, ಭಾರತೀಯ ಜನತಾ ಪಕ್ಷ

1. ಸ್ವಾತಂತ್ರ್ಯ ಬಂದ ತರುಣದಲ್ಲೇ ನಮ್ಮ ದೇಶದಲ್ಲಿ ತೆಗೆದುಕೊಳ್ಳಬೇಕಿದ್ದ, ಆದರೆ ದುರದೃಷ್ಟವಶಾತ್ ಕೈಗೊಳ್ಳಲಾಗದ ಕೆಲವು ಅತ್ಯಗತ್ಯ ನಿರ್ಧಾರಗಳಲ್ಲಿ 'ಸಮಾನ ಸಿವಿಲ್ ಸಂಹಿತೆ'ಯ ಜಾರಿ ಸಹ ಒಂದು. 1947ರಲ್ಲೇ – ಆ ಮಧ್ಯರಾತ್ರಿಯಲ್ಲಿಯೇ, ಅನೇಕ ಅಂಧಕಾರಗಳನ್ನು ಹೊಡೆದೋಡಿಸಲು, ನಮ್ಮ ದೇಶವನ್ನು ಕರೆದೊಯ್ಯುವ ದಿಕ್ಕನ್ನು ಗುರುತಿಸಲು, ನಾಗರಿಕರಲ್ಲಿ ಸಮಾನ ಭಾವನೆ ತುಂಬಲು ಅನೇಕ ಸಂಗತಿಗಳು ಜರುಗಬೇಕಿತ್ತು.

ಆದರೆ ಪ್ರತಿಯೊಂದರಲ್ಲೂ ಓಟು ಕಾಣುವ, ಈ ದೇಶದ ಉದ್ಧಾರಕರೆನಿಸಿಕೊಂಡಿರುವ ರಾಜಕಾರಣಿಗಳ ಕಾರ್ಯದಿಂದಾಗಿ ಎಲ್ಲೆಡೆ ಪ್ರತ್ಯೇಕತಾ ಭಾವವೇ ಪ್ರಧಾನವಾಗಿ ಭಾರತೀಯತ್ವ ಕಡಿಮೆಯಾಗಿದೆ. 'ಸಮಾನತೆ ದೇಶಕ್ಕೆ ಅಗತ್ಯ. ಅಸಮಾನತೆ ಅಧಿಕಾರಕ್ಕೆ ಅತ್ಯಗತ್ಯ' ಎಂಬ ಕ್ರೂರ ಸತ್ಯವನ್ನು ನೋಡುತ್ತಿದ್ದೇವೆ. ಭಾಷಾಧಾರಿತ, ಪ್ರಾಂತ್ಯಾಧಾರಿತ, ಜಾತಿ ಆಧಾರಿತ, ಧರ್ಮ ಆಧಾರಿತ ಅಂಶಗಳು ಪ್ರಧಾನವಾಗಿರುವುದು ಈ ಕಾರಣದಿಂದಾಗಿ.

ಸಮಾನ ಕ್ರಿಮಿನಲ್ ಸಂಹಿತೆ ಇರಬಹುದಾದರೆ ಸಮಾನ ಸಿವಿಲ್ ಸಂಹಿತೆ ಯಾಕೆ ಬೇಡ?

ಸಮಾನ ಸಿವಿಲ್ ಸಂಹಿತೆಯ ಕೊರತೆಯಿಂದಾಗಿ ವಿವಿಧ ವರ್ಗಗಳ ಜನತೆಗೆ ವಿಶೇಷವಾಗಿ ಮಹಿಳೆಯರಿಗೆ ಸಮಾನ ನ್ಯಾಯ ದೊರಕುವುದು ಅಸಾಧ್ಯವಾಗಿದೆ.

ದೇಶದ ಪ್ರಜೆಯಾಗಿ, ಒಮ್ಮೆ ಮನೆಯಿಂದ ಹೊರಗೆ ಬಂದೊಡನೆ ಸಮಾನ ಕಾಯ್ದೆಗಳ ಪರಿವಿಡಿಯೊಳಗೆ ಬರುವುದು ಪ್ರತಿಯೊಬ್ಬ ಪ್ರಜೆಗೂ ಕ್ಷೇಮ, ಒಂದು ರಾಷ್ಟ್ರದ ಕಲ್ಪನೆಗೂ ಪೂರಕ.

2. ಸಾಮಾನ್ಯವಾಗಿ ಸಮಾನ ಸಿವಿಲ್ ಸಂಹಿತೆ ಎಂದೊಡನೆ ಯಾವುದೋ ಒಂದು ಬಹುಸಂಖ್ಯಾತ ಧರ್ಮದ ಹಿಡಿತಕ್ಕೆ ಬೇರೆಲ್ಲಾ ಧರ್ಮೀಯರನ್ನು ಒಳಪಡಿಸುವುದು ಎಂಬ ಭಾವನೆ ಬೇರೂರಿಸಲಾಗಿದೆ. ಇದನ್ನು ಸರಿಪಡಿಸಲು ಯಾವ ಪ್ರಾಮಾಣಿಕ ಪ್ರಯತ್ನಗಳೂ ಯಶ ಕಂಡಿಲ್ಲ. ವಿಚಾರ ವಿನಿಮಯದ ಬದಲಿಗೆ, ಚರ್ಚೆಗಳ ಬದಲಿಗೆ, ಭಾವನೆಗಳ ಆಕ್ರಮಣ ಯಶಸ್ವಿಯಾಗಿ ನಡೆದಿದೆ.

ಈಗ ಇರುವ ವಿವಿಧ ಸಿವಿಲ್ ಸಂಹಿತೆಗಳನ್ನು ಅಧ್ಯಯನ ಮಾಡಿ, ಅವುಗಳಲ್ಲಿರುವ ಪಾಸಿಟಿವ್ ಅಂಶಗಳನ್ನು ಕ್ರೋಢೀಕರಿಸಿ, ಅನಿಷ್ಟ ಅಂಶಗಳಿಗೆ ತಿಲಾಂಜಲಿ ನೀಡಬೇಕು. ಇದುವರೆಗೆ ಅನುಭವದ ಆಧಾರದ ಮೇಲೆ, ವಿವಿಧ ವರ್ಗಗಳಿಗೆ ಆಗುತ್ತಿರುವ ಅನ್ಯಾಯ, ಶೋಷಣೆಗಳನ್ನು ಗಮನದಲ್ಲಿಟ್ಟುಕೊಂಡು, ಎಲ್ಲಾ ನಕರಾತ್ಮಕ, ಅಸಂಬದ್ಧ ಅಂಶಗಳಿಗೆ ಇತಿಶ್ರೀ ಹಾಡಿ ಸಮಾನ ಸಂಹಿತೆ ರೂಪಿಸಬೇಕಾಗಿದೆ. ಎಲ್ಲರಿಗೂ ವಿಶ್ವಾಸ ತರಬಲ್ಲ, ಸಮಾನ ಸಿವಿಲ್ ಸಂಹಿತೆ ಸಾಧ್ಯವಷ್ಟೇ ಅಲ್ಲ, ಅಗತ್ಯ ಕೂಡಾ. "ಎಲ್ಲರಿಗೆ ಸಮಾನ ನ್ಯಾಯ, ವಿವಿಧ ಸಂಹಿತೆಗಳಡಿಯಲ್ಲಿ ಆಗುತ್ತಿರುವ ಅನ್ಯಾಯ, ಶೋಷಣೆಗಳಿಗೆ ವಿದಾಯ" ಇದು ಸಮಾನ ಸಿವಿಲ್ ಸಂಹಿತೆಯ ಪ್ರಧಾನ ಸೂತ್ರವಾಗಬೇಕು.

3. ಸ್ವಾತಂತ್ರ್ಯ ಬಂದ ಈ 48-49 ವರ್ಷಗಳಲ್ಲಿ ದೇಶವನ್ನು ಒಗ್ಗೂಡಿಸುವ ಯಾವುದೇ ಪ್ರಯತ್ನಕ್ಕೆ ದುರದ್ದೇಶಪೂರ್ವಕ ಪ್ರತಿರೋಧ ವ್ಯಕ್ತವಾಗುವುದು, ಆ ಪ್ರಯತ್ನಕ್ಕೆ ಕಪ್ಪು ಮಸಿ ಬಳಿದು ಏನೆಲ್ಲಾ ಆರೋಪಗಳನ್ನು ಮಾಡುವ ವ್ಯವಸ್ಥಿತ ಸಂಚಿಗೆ ವಿಪುಲ ಸಹಕಾರ ಸಿಗುತ್ತಿರುವುದು ದುರಂತ. ಸುಪ್ರೀಂ ಕೋರ್ಟ್ ಶಹಬಾನು ಪ್ರಕರಣದಲ್ಲಿ ತೀರ್ಪು ಕೊಟ್ಟಾಗ ಅದನ್ನು ನ್ಯಾಯವೆಂದು ಸ್ವೀಕರಿಸಿದರೆ "ಒಂದು ಧರ್ಮದ ಮೇಲೆ ಬೇರೆಯವರ ಭಾವನೆಗಳನ್ನು ಹೇರುವ ಪ್ರಯತ್ನ" ಎಂದು ವ್ಯಾಪಕ ಪ್ರಚಾರ ನೀಡಿ ಮುಸ್ಲಿಂ ಮಹಿಳೆಯರಿಗೆ ಸಿಗಬಹುದಿದ್ದ ಪರಿಹಾರದ ಆಶಾಕಿರಣವನ್ನು ನಂದಿಸಿದ್ದು ಓಟಿನ ರಾಜಕಾರಣ ಎಂಬುದು ಎಲ್ಲರಿಗೂ ತಿಳಿದ ದುರಂತಸತ್ಯ. ಶಹಬಾನು ನ್ಯಾಯಕ್ಕಾಗಿ ಪ್ರಯತ್ನಿಸಿದ ಶೋಷಿತ ಮಹಿಳೆಯಾಗದೆ, ಆಕೆಗೆ ದೊರೆತ ತೀರ್ಪು 'ಶೋಷಿತ ಜನತೆ'ಯ ಮೇಲೆ ದಾಳಿಯಾಗಿ ಪರಿವರ್ತನೆ ಆದದ್ದು ಒಂದು ವಿಪರ್ಯಾಸ.

ಪ್ರಾಯಶಃ ಅರ್ಧ ಶತಮಾನದ ನಂತರವಾದರೂ ಈ ರೀತಿ ಆತಂಕಗಳಿಗೆ, ಭಯಪೂರಿತ ಕಲ್ಪನೆಗಳಿಗೆ ಕೊನೆ ಹಾಡಬೇಕಿದೆ. ಕಂಡಿಷನಲ್ ಭಾರತೀಯರಿಂದ ಕಂಡಿಷನಲ್ ಪ್ರಜಾಪ್ರಭುತ್ವವಾದಿಗಳಿಂದ ಜನತೆ ಬಚಾವಾಗಬೇಕಾಗಿದೆ. ಪ್ರತಿ ಹಂತದಲ್ಲಿ ಪ್ರಗತಿ ಕಾರ್ಯಕ್ರಮಗಳಿಗೆ ಅಡ್ಡಗಾಲು ಹಾಕದೆ, ನಿಜವಾಗಿಯೂ ಈ ಸಂಹಿತೆಯ ಅಗತ್ಯವಿರುವ ಉಪೇಕ್ಷಿತ ವರ್ಗಗಳ ಹಿತವನ್ನು ಗಮನದಲ್ಲಿಟ್ಟುಕೊಂಡಾಗ ಸಮಾನ ಸಂಹಿತೆಯ ಪ್ರಸ್ತುತತೆ ಸ್ಪಷ್ಟವಾಗುತ್ತದೆ. ಇಡೀ ಜನಾಂಗವನ್ನು ತಮ್ಮ ಕಪಿಮುಷ್ಟಿಯಲ್ಲಿ ಸಿಲುಕಿಸಿಕೊಂಡು, ಅವರಿಗೆ ಆತಂಕಗಳನ್ನು ಆಗಿಂದಾಗ್ಗೆ ಕಲ್ಪಿಸಿ, ತಮ್ಮ ಬೇಳೆಕಾಳು ಬೇಯಿಸಿಕೊಳ್ಳುವ ಕೆಲವೇ ಮುಂದಾಳುಗಳನ್ನು ತುಷ್ಟೀಕರಣ ಮಾಡುವ ನೀತಿಯಿಂದಾಗಿ ಇಂದು ಈ ಆರೋಪಗಳಿಗೆ ಅನಗತ್ಯ ಶಕ್ತಿ ಬಂದಿದೆ. ಅದೇ ರೀತಿ ಈ ಆರೋಪಗಳು ಹುಸಿ ಎಂಬ ಸತ್ಯವನ್ನು ಮನಗಾಣುವ ಕಾಲ ಬಂದಿದೆ.



ಸಂವಾದ

# ಜನಸಮ್ಮತವಾದ ಸಿವಿಲ್ ಸಂಹಿತೆ ಬೇಕು

ಡಾ. ಸಿದ್ದನಗೌಡ ಪಾಟೀಲ, ಸಹಕಾರ್ಯದರ್ಶಿ, ಕರ್ನಾಟಕ ರಾಜ್ಯ ಮಂಡಳಿ, ಭಾರತೀಯ ಕಮ್ಯುನಿಸ್ಟ್ ಪಕ್ಷ

1. ವಿವಿಧ ಭಾಷೆ, ಸಂಸ್ಕೃತಿ , ಧರ್ಮ, ಜಾತಿಗಳಿರುವ ನಮ್ಮ ದೇಶ ವಿವಿಧ ಆಚಾರ, ವಿಚಾರ, ಜೀವನ ವಿಧಾನಗಳನ್ನು ಹೊಂದಿದೆ. ಈ ಹಿಂದೆ ಊಳಿಗಮಾನ್ಯ ಸಮಾಜ ವ್ಯವಸ್ಥೆ ಅಥವಾ ಅದಕ್ಕೂ ಹಿಂದಿನ ಕಾಲದ ನಾಗರಿಕತೆಯಲ್ಲಿ ಸೃಷ್ಟಿಸಿರುವ ಸಾಮಾಜಿಕ ನಿಯಮಗಳೂ, ನೀತಿ ಸಂಹಿತೆಗಳೂ ಅಂದಿನ ಪಳೆಯುಳಿಕೆಗಳಾಗಿ ಇಂದಿಗೂ ಜೀವಂತವಾಗಿ ಉಳಿದಿವೆ. ಆದರೆ ಆಧುನಿಕ ಸಮಾಜ ವ್ಯವಸ್ಥೆಯಲ್ಲಿ, ಹೊಸರೀತಿಯ ಜೀವನ ವಿಧಾನದಲ್ಲಿ ಜನತೆಯ ಸಾಮೂಹಿಕ ಬದುಕು ಏಕರೂಪದ್ದಾದರೂ ಹಿಂದೆ ರೂಪಿಸಿಕೊಂಡ ಅವರವರ ಧರ್ಮ-ಜಾತಿ-ಭಾಷೆಯನ್ನಾಧರಿಸಿದ ಹಲವಾರು ಆಚಾರ ವಿಚಾರಗಳು ಪ್ರತ್ಯೇಕವಾಗಿಯೇ ಇವೆ. ಈ ರೀತಿ ಪ್ರತ್ಯೇಕವಾಗಿ ಉಳಿದಿರುವ ಕೆಲವು ಆಚರಣೆಗಳು ಆಧುನಿಕ ಸಾಮಾಜಿಕ ಬದುಕಿನಲ್ಲಿ ವೈರುಧ್ಯಮಯ ಗುಣಗಳನ್ನು ಪಡೆದಿವೆ. ಈ ವೈರುಧ್ಯಗಳು ಕೆಲವೊಮ್ಮೆ ಅನಾವಶ್ಯಕವಾದ ಪ್ರತ್ಯೇಕತೆಯನ್ನು ಭಾವನಾತ್ಮಕ ನೆಲೆಯಲ್ಲಿ ಸೃಷ್ಟಿಸುತ್ತವೆ. ಜಾತಿ ಆಧಾರಿತ, ವೃತ್ತಿ ಆಧಾರಿತ ಹಾಗೂ ಲಿಂಗ ಆಧಾರಿತ ಆಚರಣೆಗಳು ಮನುಷ್ಯ ಮನುಷ್ಯನನ್ನು ಪ್ರತ್ಯೇಕಿಸುವ ಗುಣಗಳನ್ನು ಹೊಂದಿವೆ. ಮುಖ್ಯವಾಗಿ ಲಿಂಗ ಆಧಾರಿತ ಆಚರಣೆಗಳು ಗಂಡು ಹೆಣ್ಣಿನ ಮಧ್ಯೆ ಅಮಾನವೀಯವಾದ ತಾರತಮ್ಯವನ್ನು ಸೃಷ್ಟಿಸುತ್ತಿವೆ. ಇಂಥ ತಾರತಮ್ಯವನ್ನು ತೊಡೆದು ಹಾಕುವಂಥ, ಆಧುನಿಕ ಸಮಾಜದಲ್ಲಿ ಮನುಷ್ಯ ಸಂಬಂಧವನ್ನು ಮಾನವೀಕರಣಗೊಳಿಸುವಂಥ, ಒಬ್ಬ ವ್ಯಕ್ತಿಯ ಸ್ವಾತಂತ್ರ್ಯ ಯಾವುದೇ ಕಾರಣಕ್ಕೂ ಇನ್ನೊಬ್ಬ ವ್ಯಕ್ತಿಯ ಸ್ವಾತಂತ್ರ್ಯಕ್ಕೆ ಧಕ್ಕೆ ತರದಂತಹ ಆಚರಣೆಯನ್ನು ರೂಪಿಸುವ ಒಂದು ಸಮಾನ ಸಿವಿಲ್ ಸಂಹಿತೆಯು ನಮ್ಮ ದೇಶಕ್ಕೆ ಬೇಕಾಗಿದೆ. ಬದಲಾದ ಜೀವನ ವಿಧಾನಕ್ಕೆ ಪೂರಕವಾದ ಒಂದು ನೀತಿ ಸಂಹಿತೆ ಅಥವಾ ಸಂವಿಧಾನಾತ್ಮಕವಾದ 'ಸಮಾನ ಸಿವಿಲ್ ಸಂಹಿತೆ' ಅಗತ್ಯ.

2. 'ಸಮಾನ ಸಿವಿಲ್ ಸಂಹಿತೆ' ಮುಖ್ಯವಾಗಿ ದೇಶದ ಒಟ್ಟಾರೆ ಮಹಿಳೆಯ ವೈವಾಹಿಕ ಸಂಬಂಧಗಳ ಕುರಿತು ಹಾಗೂ ಆರ್ಥಿಕ ಸ್ಥಾನಮಾನಗಳ ಕುರಿತು ಮಾತನಾಡಬೇಕು. ಮೇಲೆ ಹೇಳಿದಂತೆ ವಿವಿಧ ಧರ್ಮ ಹಾಗೂ ಸಂಸ್ಕೃತಿಗಳಡಿಯಲ್ಲಿ ಬದುಕುತ್ತಿರುವ ನಮ್ಮ ದೇಶದ ಜನಸಮುದಾಯದ ವಿಭಿನ್ನ ಆಚರಣೆಗಳು ಹಲವಾರು ಸಂದರ್ಭದಲ್ಲಿ ಮಹಿಳೆಯ ಮೂಲಭೂತ ಹಕ್ಕನ್ನು ಮೊಟಕುಗೊಳಿಸಿವೆ. ದೇಶದ ಒಬ್ಬ ಪ್ರಜೆಯಾಗಿ ಮಹಿಳೆಗೆ ನಮ್ಮ ದೇಶದ ಸಂವಿಧಾನ ಧರ್ಮಾತೀತವಾದ ಹಲವಾರು ಮೂಲಭೂತ ಹಕ್ಕುಗಳನ್ನು ಕೊಟ್ಟಿದೆ. ಉದಾಹರಣೆಗಾಗಿ: ಭಾರತೀಯ ಸಂವಿಧಾನದ (ಮೂರನೇ ಭಾಗದ) ಪರಿಚ್ಛೇದ-15 ''ರಾಜ್ಯವು ಯಾವನೇ ನಾಗರಿಕನ ವಿರುದ್ಧ ಧರ್ಮ, ಮೂಲವಂಶ, ಜಾತಿ, ಲಿಂಗ, ಜನ್ಮ ಸ್ಥಳ ಅಥವಾ ಅವುಗಳಲ್ಲಿ ಯಾವೊಂದರ ಆಧಾರದ ಮೇಲೆ ಮಾತ್ರವೇ ಯಾವ ತಾರತಮ್ಯವನ್ನೂ ಮಾಡತಕ್ಕುದಲ್ಲ'' ಎಂದು ಹೇಳುತ್ತದೆ. ಸಮಾನತೆಯ ಹಕ್ಕಿನಡಿಯಲ್ಲಿ ರಾಜ್ಯ ಈ ನಿಯಮವನ್ನು ಅನುಸರಿಸಬೇಕು. ಅಲ್ಲದೆ ಸಂವಿಧಾನದ ಭಾಗ-4(ಕ) ಹೇಳುವ ಮೂಲಭೂತ ಕರ್ತವ್ಯಗಳಲ್ಲಿ ''ಧಾರ್ಮಿಕ, ಭಾಷಾ ಮತ್ತು ಪ್ರಾದೇಶಿಕ ಅಥವಾ ಜಾತಿ, ಪಂಗಡಗಳ ಭಿನ್ನತೆಗಳಿಂದ ಅತೀತವಾಗಿ ಭಾರತದ ಎಲ್ಲಾ ಜನತೆಯಲ್ಲಿ ಸಾಮರಸ್ಯವನ್ನೂ ಮತ್ತು ಸಮಾನ ಭ್ರಾತೃತ್ವವನ್ನು ಬೆಳೆಸುವುದು, ಸ್ತ್ರೀಯರ ಗೌರವಕ್ಕೆ ಕುಂದುಂಟುಮಾಡುವ ಆಚರಣೆಗಳನ್ನು ಬಿಟ್ಟುಬಿಡುವುದು'' ಎಂದಿದೆ. ನಮ್ಮ ಸಂವಿಧಾನ ಜಾರಿಗೆ ಬಂದು ಅರ್ಧ ಶತಮಾನ ಸಮೀಪಿಸುತ್ತಿದ್ದರೂ ಈ ಮೇಲಿನ ಅಂಶಗಳು ಅರ್ಥಪೂರ್ಣವಾಗಿ ಜಾರಿಗೆ ಬಂದಿಲ್ಲ. ಮುಖ್ಯವಾಗಿ ಲಿಂಗ ತಾರತಮ್ಯವನ್ನು ತೊಡೆದು ಹಾಕುವಲ್ಲಿ 'ರಾಜ್ಯ' ವಿಫಲವಾಗಿದೆ. ಹಕ್ಕು ಮತ್ತು ಕರ್ತವ್ಯ ಎರಡನ್ನೂ ಗಮನದಲ್ಲಿರಿಸಿಕೊಂಡರೂ ಈ ವೈಫಲ್ಯತೆಯನ್ನು ನಾವು ಕಾಣುತ್ತೇವೆ. ಇದಕ್ಕೆ ಕಾರಣ: ಸಂವಿಧಾನ ಬದ್ಧ ನಿಷ್ಠುರತೆಯ ಕೊರತೆಯನ್ನು ನಮ್ಮ ಶಾಸಕಾಂಗ ಮತ್ತು ನ್ಯಾಯಾಂಗದಲ್ಲಿ, ಅದೇ ರೀತಿ ಧರ್ಮದ ಹೆಸರಿನಲ್ಲಿ ಮೂಲಭೂತ ಕರ್ತವ್ಯಗಳನ್ನು ತಳ್ಳಿಹಾಕುವ ಧಾರ್ಮಿಕ ಮುಖಂಡರಲ್ಲಿಯೂ ಕಾಣುತ್ತೇವೆ. ಶಹಬಾನು ಪ್ರಕರಣ ಈ ಮೇಲಿನ ಅನಿಸಿಕೆಗಳಿಗೆ ಒಂದು ಸ್ಪಷ್ಟ ಉದಾಹರಣೆ.

ಇನ್ನು ''ಸಮಾನ ಸಿವಿಲ್ ಸಂಹಿತೆ''ಯ ಬಗ್ಗೆ ಮಾತನಾಡಬೇಕೆಂದರೆ ನಮ್ಮ ಸಂವಿಧಾನದ ಭಾಗ-4ರ 44ನೇ ಪರಿಚ್ಛೇದ'' ಭಾರತದ ಎಲ್ಲ ರಾಜ್ಯ ಕ್ಷೇತ್ರದಾದ್ಯಂತ ನಾಗರಿಕರಿಗೆ ಏಕ ರೂಪದ ಸಿವಿಲ್ ಸಂಹಿತೆಯನ್ನು ಸುನಿಶ್ಚಿತಗೊಳಿಸುವುದಕ್ಕಾಗಿ ರಾಜ್ಯವು ಪ್ರಯತ್ನಿಸತಕ್ಕುದು'' ಎಂದು ಹೇಳುತ್ತದೆ. ಇದನ್ನು ರಾಜ್ಯ ನೀತಿಯ ನಿರ್ದೇಶಕ ತತ್ವಗಳಡಿಯಲ್ಲಿ ಹೇಳಲಾಗಿದೆ. ಕಾರಣ, ರಾಜ್ಯ ಇದನ್ನು ನಿರ್ದಿಷ್ಟವಾದ ಗುರಿಯನ್ನಾಧರಿಸಿದ ಕಾನೂನನ್ನಾಗಿ

ಮಾಡಬೇಕು. ನಮ್ಮ ರಾಜ್ಯದ ಸೂತ್ರಧಾರಿಗಳಾದ ರಾಜಕೀಯ ಪಕ್ಷಗಳು ಎಷ್ಟರಮಟ್ಟಿಗೆ ಇದನ್ನು ಅದರ ಮೂಲಭೂತ ಉದ್ದೇಶಕ್ಕಾಗಿ ಬಳಕೆ ಮಾಡುತ್ತವೆಂಬುದರಲ್ಲಿ ಸಂದೇಹಗಳಿವೆ. ಇದೇ ಭಾಗದ ಪರಿಚ್ಛೇದ-39ರಲ್ಲಿ ''ನಾಗರಿಕರು, ಪುರುಷರು, ಮತ್ತು ಸ್ತ್ರೀಯರು ಸಮಾನವಾಗಿ ಜೀವನ ನಿರ್ವಹಿಸುವುದಕ್ಕೆ ಸಾಕಷ್ಟು ಸಾಧನಗಳನ್ನು ಹೊಂದಲು ಹಕ್ಕನ್ನು ಹೊಂದುವುದು'' ಎಂದು ಹೇಳಿದೆ. ಈ ನಿರ್ದೇಶನದ ಅಡಿಯಲ್ಲಿ ಹಲವಾರು ಕಾನೂನುಗಳಿದ್ದೂ ಲಿಂಗತಾರತಮ್ಯವನ್ನು ನಿವಾರಿಸುವಲ್ಲಿ ನಮ್ಮ 'ರಾಜ್ಯ' ವಿಫಲವಾಗಿದೆ.

ಮೇಲಿನ ಅನುಭವದ ಹಿನ್ನೆಲೆಯಲ್ಲಿ 'ರಾಜ್ಯ'ದ ವಿಫಲತೆಗಳನ್ನು ಗಮನಿಸಿ ಕೈಕಟ್ಟಿ ಕೂರುವುದು ಸೂಕ್ತವಾಗುವುದಿಲ್ಲ. ಸಂವಿಧಾನದ ಪರಿಚ್ಛೇದ 44ರ 'ಏಕ ರೂಪ ಸಿವಿಲ್ ಸಂಹಿತೆ'ಯ ನಿರ್ದೇಶನದಲ್ಲಿ ಪ್ರಸ್ತುತ ಸಮಾಜದಲ್ಲಿರುವ ವೈರುಧ್ಯಮಯ ಆಚರಣೆಗಳನ್ನು ಮುಖ್ಯವಾಗಿ ಲಿಂಗ ತಾರತಮ್ಯದ ಆಚರಣೆಗಳಾದ ಸ್ತ್ರೀಯ ವಿವಾಹೋತ್ತರ ಸಂಬಂಧಗಳು (ವಿಚ್ಛೇದನ ಇತ್ಯಾದಿ) ಹಾಗೂ ಸ್ತ್ರೀಗೆ ಆರ್ಥಿಕ ಹಕ್ಕಿನ ಕುರಿತ ವಿಷಯಗಳಲ್ಲಿ ಸ್ಪಷ್ಟವಾದ ಕಾನೂನುಗಳನ್ನು ಮಾಡಬೇಕು. 'ಸಮಾನ ಸಿವಿಲ್ ಸಂಹಿತೆ'ಯನ್ನು ಜಾರಿಗೆ ತರುವ ಮೊದಲು ಅದರ ಕರಡು (ಡ್ರಾಫ್ಟ್) ವರದಿಯನ್ನು ಸಿದ್ಧಪಡಿಸಿ ಎಲ್ಲ ಧರ್ಮ, ಜಾತಿ, ಭಾಷೆಯ ಜನರ ಮಧ್ಯೆ ಚರ್ಚೆಗೆ ಬಿಡುಗಡೆ ಮಾಡಿ ಅಭಿಪ್ರಾಯ ಸಂಗ್ರಹಿಸಬೇಕು. ಈ ಕರಡು ವರದಿ ಈಗಾಗಲೇ ಈ ಸಂಹಿತೆ ಒಳಗೊಂಡಿರುವ ವಿಷಯದ ಸಮಾನ ಅಂಶದ ಕಾನೂನುಗಳ ವೈಫಲ್ಯಕ್ಕೆ ಅಂಶಗಳನ್ನು ಗಮನಿಸಿ ಆ ವಿಫಲತೆಗಳಿಗೆ ಪ್ರತಿಯಾಗಿ ಸಂವಿಧಾನಾತ್ಮಕವಾದ, ಪ್ರಜಾಸತ್ತಾತ್ಮಕವಾದ ಪರ್ಯಾಯವನ್ನು ಸೂಚಿಸಬೇಕು.

3. ಸಮಾನ 'ಸಿವಿಲ್ ಸಂಹಿತೆ' ಯ ಸ್ಪಷ್ಟವಾದ ಪರಿಕಲ್ಪನೆಯನ್ನು ಸಾರ್ವಜನಿಕರಿಗೆ ತಿಳಿಯಪಡಿಸದೇ ಇರುವುದರಿಂದ ಇಂಥ ಗೊಂದಲಗಳುಂಟಾಗುತ್ತವೆ. ಸರಕಾರ ಮೊದಲು ಕರಡು ರೂಪದಲ್ಲಿ ತನ್ನ ಪರಿಕಲ್ಪನೆಯನ್ನು ಜನರಿಗೆ ಸ್ಪಷ್ಟಪಡಿಸಬೇಕು. ಇಂದು ಎಲ್ಲ ಧರ್ಮಗಳೂ ತಾರತಮ್ಯವನ್ನಾಧರಿಸಿದ ಹಲವಾರು ಆಚರಣೆಗಳನ್ನು ಹೊಂದಿವೆ. ಅಂಥ ಎಲ್ಲ ತಾರತಮ್ಯಗಳನ್ನೂ ನಿವಾರಿಸುವ ಒಂದು ಜಾತ್ಯಾತೀತವಾದ ಗುಣಲಕ್ಷಣ ಈ 'ಸಂಹಿತೆ'ಗೆ ಇರಬೇಕು. ಹಿಂದೂ ಧರ್ಮದ ವಕ್ತಾರರಂತೆ ವಾದಿಸುತ್ತಿರುವ ಬಿ.ಜೆ.ಪಿ. ಉದ್ದೇಶಪೂರ್ವಕವಾಗಿಯೇ ಇದನ್ನು ಮುಸ್ಲಿಂ ವಿರೋಧಿ ಎಂದು ಪ್ರಚಾರ ಮಾಡುತ್ತಿದೆ. ಇದರ ಪರಿಣಾಮವನ್ನು ಸಹಜವಾಗಿ ಮುಸ್ಲಿಂ ಮೂಲಭೂತವಾದಿಗಳು ಬಂಡವಾಳ ಮಾಡಿಕೊಳ್ಳುತ್ತಾರೆ. ಎರಡೂ ಕಡೆಯ ಈ ಭಾವನೆಗಳು ಪಟ್ಟಭದ್ರ ಹಿತಾಸಕ್ತಿಯ ರಾಜಕಾರಣಿಗಳಿಗೆ ಅಸ್ತ್ರವಾಗುವ ಅಪಾಯವಿದೆ. ಹಿಂದೂ ಧರ್ಮದಲ್ಲಿಯೇ ಇರುವ ತಾರತಮ್ಯಗಳನ್ನು ನಿವಾರಿಸುವ ಅಂಶಗಳನ್ನು ಈ 'ಏಕ ರೂಪ ಸಿವಿಲ್ ಸಂಹಿತೆ' ಸ್ಪಷ್ಟ ಪಡಿಸಬೇಕು. ಸಂವಿಧಾನದ ಪರಿಚ್ಛೇದ-25 ಹೇಳುವ ಧಾರ್ಮಿಕ ಸ್ವಾತಂತ್ರ್ಯದ ದುರ್ಬಳಕೆಯನ್ನು ಪರಿಣಾಮಕಾರಿಯಾಗಿ ತಡೆಯಬೇಕು.

ಒಟ್ಟಾರೆ ಪಕ್ಷರಾಜಕಾರಣ ಹಾಗೂ ಧಾರ್ಮಿಕ ಮೂಲಭೂತವಾದಿಗಳ ಹಿತಾಸಕ್ತಿಯನ್ನು ಧಿಕ್ಕರಿಸುವ ರೀತಿಯಲ್ಲಿ ಮಾನವತೆ-ಸಾಮರಸ್ಯ-ಸಮಾನತೆ ಪ್ರಧಾನವಾಗುವ ರೀತಿಯಲ್ಲಿ ಈ ಸಮಾನ ಸಿವಿಲ್ ಸಂಹಿತೆ ಜಾರಿಗೆ ಬರಬೇಕು ಮತ್ತು ಇದರ ಕುರಿತು ಸ್ಪಷ್ಟವಾದ ತಿಳುವಳಿಕೆಯನ್ನು, ಪೂರಕವಾದ ಅಭಿಪ್ರಾಯವನ್ನು, ಜನರಲ್ಲಿ ಮೂಡಿಸಬೇಕು. ಇದನ್ನು ಮಾಡಲು ಸರಕಾರಕ್ಕೆ ಮುಖ್ಯವಾಗಿ ಇಚ್ಛಾಶಕ್ತಿ ಹಾಗೂ ಉದ್ದೇಶಕ್ಕಾಗಿ ಬದ್ಧತೆ ಬೇಕು.

★ ★ ★ ★



**ಡಾ|| ಬಿ.ಕೆ. ಸದಾಶಿವ ಸಿಂಗ್**
**ಅವರಿಗೆ 'ಅಚಲ' ಆಭಾರಿಯಾಗಿದೆ**

## ಕಾಲ ಪಕ್ವವಾಗಿಲ್ಲ

ಪ್ರಫುಲ್ ಮಧುಕರ್, ಪ್ರಧಾನ ಕಾರ್ಯದರ್ಶಿ, ಪ್ರದೇಶ ಜನತಾ ದಳ

ಸಮಾನ ನಾಗರಿಕ ಸಂಹಿತೆಗೆ ಯೋಚಿಸುವ ಕಾಲ ಈಗ ಅಲ್ಲ. ಕಾಲ ಪಕ್ವವಾಗಿಲ್ಲ. ಈಗಿರುವ ಕಾನೂನುಗಳೆಲ್ಲ ಧರ್ಮ ಆಧಾರಿತವಾಗಿವೆ. ಈ ಸಂಹಿತೆ ಕುರಿತಂತೆ ಹೆಚ್ಚಾಗಿ ಹಿಂದೂ ಧರ್ಮದ ಏಜಂಟರಂತೆ ವರ್ತಿಸುವ ಕೆಲವು ಪಕ್ಷಗಳು ಮಾತಾಡುವುದರಿಂದ ಬೇರೆಯವರು ಅದನ್ನೂ ಸಂಶಯದಿಂದ ನೋಡಲು ಅವಕಾಶವಾಗುತ್ತದೆ. ಎಲ್ಲ ಧರ್ಮಗಳ ಪ್ರಗತಿಪರ ಧೋರಣೆಗಳು ಒಂದಾಗಿ ಎಲ್ಲರಿಗೂ ಸಮಾನ ಅವಕಾಶದ ವ್ಯವಸ್ಥೆ ಬರುವವರೆಗೆ ಅಂಥ ಸಂಹಿತೆಗೆ ಕಾಲ ಪಕ್ವವಾಗಿಲ್ಲ ಎಂದೇ ನನ್ನ ಭಾವನೆ. ಎಲ್ಲ ಮಹಿಳೆಯರೂ ಈ ವಿಷಯದಲ್ಲಿ ಚರ್ಚೆ ಮಾಡಬೇಕಾದುದು ಅಗತ್ಯ. ಸಮಾನ ನಾಗರಿಕ ಸಂಹಿತೆಯೊಂದು ರೂಪುಗೊಳ್ಳಲು ಸಹ ಕಾಲ ಪಕ್ವವಾಗಿಲ್ಲ. ಇನ್ನು ಬೇರೆ ವಿಚಾರ ಎಲ್ಲಿ ಬಂತು?

ಧರ್ಮದ ಭಾವನೆಗಳನ್ನು ಹೊರಿಸುವ ಯತ್ನ ಮಾಡಲಾಗುತ್ತಿದೆ ಎಂಬುದೂ ನನ್ನ ಭಾವನೆ. ಹಿಂದೂ ಧರ್ಮದ ಪ್ರತಿಪಾದಕರೆಂದು ಹೇಳಿಕೊಳ್ಳುವ ಕೆಲವು ರಾಜಕೀಯ ಪಕ್ಷಗಳು ಹಿಂದೂ ಧರ್ಮದ ಕಾನೂನನ್ನು ಹೇರಲು ಪ್ರಯತ್ನಿಸುತ್ತಿದ್ದಾರೆ.

★ ★ ★ ★

## ಎಲ್ಲರೂ ಒಪ್ಪಬಲ್ಲ ಭದ್ರವಾದ ಕಾಯ್ದೆ ಸಾಧ್ಯ

ವಿ.ಬಿ. ಕುಟಿನೋ, ಪ್ರಾಂಶುಪಾಲರು ಮತ್ತು ವಿಭಾಗ ಮುಖ್ಯಸ್ಥರು, ಕಾನೂನು ಸ್ನಾತಕೋತ್ತರ ಅಧ್ಯಯನ ವಿಭಾಗ,, ಬೆಂಗಳೂರು ವಿಶ್ವವಿದ್ಯಾಲಯ.

1. ನನ್ನ ದೃಷ್ಟಿಯಲ್ಲಿ 'ಸಮಾನ ಸಿವಿಲ್ ಸಂಹಿತೆ' ಎಂದರೆ ಮದುವೆ, ವಾರಸುದಾರಿಕೆ, ದತ್ತು ಸ್ವೀಕಾರ ಮತ್ತು ಜೀವನ ನಿರ್ವಹಣೆ (ಜೀವನಾಂಶ) ಗಳಿಗೆ ಸಂಬಂಧಿಸಿದಂತೆ ಒಂದು ಸಮಾನ ಕಾಯ್ದೆ/ಕಾನೂನು ಮಾಡುವುದು. ನನ್ನ ಅಭಿಪ್ರಾಯದಲ್ಲಿ, ನಾವು ಸಮಾನ ಸಿವಿಲ್ ಸಂಹಿತೆಯನ್ನು ಹೊಂದಬೇಕು. ಇದು ದೇಶದ ಏಕತೆ-ಸಮಗ್ರತೆ ಮತ್ತು ಅಭಿವೃದ್ಧಿಗೆ ಸಹಾಯವಾಗುತ್ತದೆ, ಹಾಗೂ ಏಕತೆಯ ಭಾವನೆ ರೂಪುಗೊಳ್ಳಲು ಸಹಕಾರಿಯಾಗುತ್ತದೆ.

2. ಸಮಾನ ಸಿವಿಲ್ ಸಂಹಿತೆಯನ್ನು ಜಾರಿಗೊಳಿಸುವಾಗ ನಾವು ಸಂವಿಧಾನದ ನಿರ್ದೇಶಕ ತತ್ವಗಳಲ್ಲಿ ನೀಡಿರುವ ನಿರ್ದೇಶನಗಳನ್ನು ದೃಷ್ಟಿಯಲ್ಲಿಟ್ಟುಕೊಂಡು, ರಾಷ್ಟ್ರ ನೀತಿಯನ್ನು ಅವಲಂಬಿಸಿ ಸಮಾನ ಸಿವಿಲ್ ಸಂಹಿತೆಯನ್ನು ಜಾರಿಗೆ ತರುವುದಾದರೆ, ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಜನರ ಕಡೆಯಿಂದ ಯಾವುದೇ ಸಮಸ್ಯೆ ಇಲ್ಲವೆಂದು ನನ್ನ ಭಾವನೆ.

3. ಸಮಾನ ಸಿವಿಲ್ ಸಂಹಿತೆ ಯಾವುದೇ ಒಂದು ಜನಾಂಗದ- ಧರ್ಮದ ನಂಬಿಕೆ ಎನ್ನುವುದನ್ನು ನಾನು ಒಪ್ಪುವುದಿಲ್ಲ. ನಾವು ಪ್ರಾಮಾಣಿಕ ಪ್ರಯತ್ನ ಮಾಡಿದರೆ, ನಾವು ಬಹಳ ಭದ್ರವಾದ ಮತ್ತು ಎಲ್ಲರೂ ಒಪ್ಪತಕ್ಕಂತಹ ಕಾಯ್ದೆಯನ್ನು, ಧಾರ್ಮಿಕ ಸ್ವಾತಂತ್ರ್ಯವನ್ನು ಅತಿಕ್ರಮಿಸದೆ ಜಾರಿಗೆ ತರಬಹುದು. ವಿಶೇಷ ವಿವಾಹ ಕಾನೂನು ಇದಕ್ಕೊಂದು ಉದಾಹರಣೆ. ಧಾರ್ಮಿಕ ಪರಿಸ್ಥಿತಿಯನ್ನು ಕೆಡಿಸದೆ ಎಲ್ಲರೂ ಇದರ ಆಶ್ರಯಪಡೆಯುತ್ತಾರೆ.

★ ★ ★ ★

## ಮತದ ಪ್ರಭಾವದಿಂದ ಕಾನೂನು ಬೇರ್ಪಡಬೇಕು

ಹೇಮಲತಾ ಮಹಿಷಿ, ನ್ಯಾಯವಾದಿ, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು

1. ಒಂದು ಭೂಭಾಗ ರಾಷ್ಟ್ರವೆಂದಾಗಬೇಕಾದರೆ ಕೆಲವೊಂದು ಅಂಶಗಳು ಆ ರಾಷ್ಟ್ರದ ಪ್ರಜೆಗಳಲ್ಲಿ ಸಮಾನವಿರಬೇಕಾಗುತ್ತದೆ. ಆ ಸಮಾನ ಅಂಶಗಳು ಪ್ರಜೆಗಳನ್ನು ಭಾವೈಕ್ಯದ ಮೂಲಕ ಒಂದುಗೂಡಿಸುವ ಕೆಲಸವನ್ನು ಮಾಡುತ್ತವೆ. ಅಂತಹ ಸಮಾನ ಅಂಶಗಳಲ್ಲಿ ಕಾನೂನು ಒಂದು. ಒಂದೊಂದು ಗುಂಪಿನ ಪ್ರಜೆಗಳು ಬೇರೆ-ಬೇರೆ ಕಾನೂನಿಗೆ ಒಳಪಡುವ ಅಂಶ ರಾಷ್ಟ್ರದ ಪರಿಕಲ್ಪನೆಗೆ ವಿರುದ್ಧವಾದುದು. ಆದ್ದರಿಂದ, ಸಮಾನ ಸಿವಿಲ್ ಸಂಹಿತೆಯ ಅವಶ್ಯಕತೆ ನಮ್ಮ ದೇಶದಲ್ಲಿ ಇದೆ. ಅದರಲ್ಲೂ ಜಾತ್ಯಾತೀತ ರಾಷ್ಟ್ರವಾದ ಭಾರತದಲ್ಲಿ ಮತದ ಪ್ರಭಾವದಿಂದ ಕಾನೂನನ್ನು ಬೇರ್ಪಡಿಸುವುದು ಅತ್ಯಂತ ಅವಶ್ಯಕವಾಗಿದೆ.

2. ಭಾರತಕ್ಕೆ ಸ್ವಾತಂತ್ರ್ಯ ದೊರೆತ ಪ್ರಾರಂಭದಲ್ಲಿಯೇ ಎಲ್ಲ ಮತಗಳ ನಾಯಕರು ಒಂದೆಡೆ ಕಲೆತು 'ಸಮಾನ ಸಿವಿಲ್ ಸಂಹಿತೆ' ಯನ್ನು ಒಪ್ಪಿಕೊಂಡು, ಅದನ್ನು ರೂಪಿಸಿದ್ದಲ್ಲಿ ಆ ಕೆಲಸ ಹೆಚ್ಚು ಸರಾಗವಾಗಬಹುದಿತ್ತು. ಆದರೆ, ಇಂದಿನ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಸಂದರ್ಭದಲ್ಲಿ 'ಸಮಾನ ಸಿವಿಲ್ ಸಂಹಿತೆ'ಯ ಕನಸು ನನಸಾಗುವುದು ಕಷ್ಟಸಾಧ್ಯವಾಗಿದೆ. ಆದ್ದರಿಂದ, ತಕ್ಷಣದಲ್ಲಿ ಅದನ್ನು ಸಾಧಿಸಲು ಪ್ರಯತ್ನಿಸದೇ, ಪ್ರತಿ ಮತೀಯ ಕಾನೂನು (Personal Laws) ಗಳಲ್ಲಿ ಆಗಬೇಕಾದ ತಿದ್ದುಪಡಿಗಳನ್ನು ಮಾಡಲು ಪ್ರಯತ್ನಿಸುವುದು ಉಚಿತ. ಬಹುಶಃ ಈ ರೀತಿಯ ತಿದ್ದುಪಡಿಗೆ ಎಲ್ಲ ಮತದ ಒಪ್ಪಿಗೆ ದೊರಕುವ ಸಾಧ್ಯತೆ ಇದೆ ಹಾಗೂ ಅಂತಹ ಸುಧಾರಣೆ ಆಯಾಯ ಮತದ ಅನುಯಾಯಿಗಳಿಂದಲೇ ಬೆಂಬಲ ಪಡೆಯುತ್ತದೆ ಎನ್ನುವ ಅಭಿಪ್ರಾಯವೂ ಇದೆ.

3. ಸಮಾನ ಸಿವಿಲ್ ಸಂಹಿತೆಯ ಹೆಸರಿನಲ್ಲಿ ಒಂದು ಧರ್ಮದ ಭಾವನೆಗಳನ್ನು ಇತರರ ಮೇಲೆ ಹೊರಿಸುವ ಯತ್ನ ಮಾಡಲಾಗುತ್ತಿದೆ ಎನ್ನುವುದು ನಿರಾಧಾರವಾದ ಆರೋಪ ಹಾಗೂ ಅದು ಅಲ್ಪ ಮತೀಯರಲ್ಲಿರುವ ಶಂಕೆಯನ್ನು, ಭಯವನ್ನು ಸೂಚಿಸುತ್ತದೆ. ಅದನ್ನು ಹೋಗಲಾಡಿಸುವುದು ಬಹುಮತೀಯರ ಆದ್ಯ ಕರ್ತವ್ಯ. ಎಲ್ಲ ಮತಗಳ ಕಾನೂನುತಜ್ಞರು, ನಾಯಕರು ಸೇರಿಕೊಂಡು, ಎಲ್ಲರಿಗೆ ಒಪ್ಪಿತವಾಗುವ, ಮಾನವೀಯತೆಯನ್ನು ಆಧರಿಸಿದ ಹೊಸ ಸಿವಿಲ್ ಕೋಡನ್ನು ರೂಪಿಸಬೇಕಾಗುತ್ತದೆ. ಹೀಗೆ ರೂಪಿಸುವಾಗ ಇತರ ಮುಂದುವರಿದ ದೇಶಗಳ ಸಿವಿಲ್ ಕಾನೂನುಗಳನ್ನು ನಮ್ಮ ದೇಶದಲ್ಲಿ ಜಾರಿಯಲ್ಲಿರುವ ಮತೀಯ ಕಾನೂನುಗಳನ್ನು ಗಮನದಲ್ಲಿರಿಸಿಕೊಂಡು, ಇಂದಿನ ಅಗತ್ಯಕ್ಕೆ ತಕ್ಕದ್ದಾದ ಸಿವಿಲ್ ಸಂಹಿತೆಯನ್ನು ರೂಪಿಸಬೇಕು. ಎಲ್ಲ ಮೂಲಗಳಿಂದ ಒಳ್ಳೆಯ ಕಾನೂನುಗಳನ್ನು ಎತ್ತಿಕೊಂಡು ಭಾರತದ ಸಮಾನ ಸಿವಿಲ್ ಸಂಹಿತೆ ರೂಪುಗೊಳ್ಳಬೇಕು ಎನ್ನುವುದು ನನ್ನ ಅಭಿಪ್ರಾಯ.



★ ★ ★ ★

# ಜನತೆಯ ಮನ ಒಲಿಸಲು ಪ್ರಯತ್ನ ಅಗತ್ಯ

ಸಾರಾ ಅಬೂಬಕ್ಕರ್, ಅಧ್ಯಕ್ಷರು, ಕರಾವಳಿ ಲೇಖಿಕಿಯರ ಸಂಘ

ನನ್ನ ದೃಷ್ಟಿಯಲ್ಲಿ 'ಸಮಾನ ಸಿವಿಲ್ ಸಂಹಿತೆ' ಎಂದರೆ ಜಾತಿ, ಧರ್ಮಗಳ ಭೇದವಿಲ್ಲದೆ ಈ ದೇಶದ ಎಲ್ಲ ನಾಗರಿಕರಿಗೂ ಸಮಾನವಾಗಿ ಅನ್ವಯವಾಗುವಂತಹ ಕಾನೂನು. ಆದರೆ ಈಗ ಜಾರಿಯಲ್ಲಿರುವಂತಹ ಹಿಂದೂ ವಿವಾಹ ಕಾಯಿದೆಯನ್ನು ಎಲ್ಲ ಪ್ರಜೆಗಳಿಗೆ ಅನ್ವಯವಾಗುವಂತೆ ಜಾರಿಗೊಳಿಸುವುದು ಅಥವಾ ಹಿಂದೂ ನಿಯಮಗಳನ್ನು ಹಿಂದೂಗಳಲ್ಲದವರ ಮೇಲೆ ಹೇರುವುದು ಖಂಡಿತವಾಗಿಯೂ ಅಲ್ಲ. ವಿವಿಧ ಧರ್ಮಗಳಿಗನುಸಾರವಾಗಿ ರೂಪುಗೊಂಡಂತಹ ವ್ಯಕ್ತಿ ನಿಯಮಗಳಿಂದ ಮಹಿಳೆಯರ ಶೋಷಣೆಗೆ ಹಾದಿ ಮಾಡಿಕೊಡದಂತಹ, ಉತ್ತಮವಾದ ಎಲ್ಲ ಧರ್ಮೀಯರಿಗೂ ಒಪ್ಪಿಗೆಯಾಗುವಂತಹ ನಿಯಮಗಳನ್ನು ಆಯ್ದುಕೊಂಡು ಹೊಸತೊಂದು ಕಾಯ್ದೆಯನ್ನು ರೂಪಿಸಿ ಈ ಹೊಸ ನಿಯಮಗಳ ಕುರಿತು ರಾಷ್ಟ್ರೀಯ ಚರ್ಚೆಯಾಗುವಂತಾಗಬೇಕು. ಮತ್ತು ಜನತೆ ತಾವಾಗಿ ಇದನ್ನು ಒಪ್ಪಿಕೊಳ್ಳುವಂತೆ ಜನತೆಯ ಮನ ಒಲಿಸಲು ಸರಕಾರ ಪ್ರಯತ್ನಿಸಬೇಕು.

'ಸಮಾನ ಸಿವಿಲ್ ಸಂಹಿತೆ'ಯ ಹೆಸರಿನಲ್ಲಿ ಒಂದು ಧರ್ಮದ ಭಾವನೆಗಳನ್ನು ಇತರರ ಮೇಲೆ ಹೊರಿಸುವ ಯತ್ನ ಮಾಡಲಾಗುತ್ತಿದೆ ಎಂಬ ಆರೋಪವಿದೆ. 'ಸಮಾನ ಸಿವಿಲ್ ಸಂಹಿತೆ' ಎಂದು ಮಾತ್ರ ಹೇಳಲಾಗುತ್ತಿದೆಯೇ ಹೊರತು ಈ ಸಂಹಿತೆಯಲ್ಲಿ ಯಾವ್ಯಾವ ಅಂಶಗಳು ಒಳಗೊಳ್ಳಬೇಕು; ಅಥವಾ ಈಗಿರುವ ನಿಯಮಗಳಿಂದ ಯಾವ್ಯಾವ ಅಂಶಗಳನ್ನು ಕೈಬಿಡಬೇಕೆಂಬ ಕುರಿತು ಯಾವುದೇ ರೀತಿಯ ಚರ್ಚೆಯೂ ಆದಂತೆ ಕಾಣುತ್ತಿಲ್ಲ. ಮುಸ್ಲಿಂ ವ್ಯಕ್ತಿ ನಿಯಮದಲ್ಲೂ ಕೆಲವು ಉತ್ತಮ ಅಂಶಗಳಿವೆ. ವಿಚ್ಛೇದನ ಸಂದರ್ಭದಲ್ಲಿ ಇಸ್ಲಾಂ ನಿಯಮದಂತೆ ವಿಚ್ಛೇದನವೇರ್ಪಡುವುದು ಉತ್ತಮ ಕ್ರಮವೆಂದು ನನ್ನ ಅಭಿಪ್ರಾಯ. ಉದಾಹರಣೆಗೆ, ಭಿನ್ನಾಭಿಪ್ರಾಯ ಹೊಂದಿದ ಗಂಡ ಹೆಂಡತಿಯರು ಮೂರು ತಿಂಗಳವರೆಗೆ ಇತರರ ಮಧ್ಯ ಪ್ರವೇಶವಿಲ್ಲದೆ ಒಂದೇ ಮನೆಯಲ್ಲಿ ಜೀವಿಸುವುದು; ಈ ಮೂರು ತಿಂಗಳುಗಳಲ್ಲೂ ಅವರಲ್ಲಿ ಪುನರ್ಮೈತ್ರಿ ಸಾಧ್ಯವಾಗದಿದ್ದಲ್ಲಿ ಆ ವಿಚ್ಛೇದನವನ್ನು ಕಾನೂನು ಸಮ್ಮತವೆಂದು ಪರಿಗಣಿಸುವುದು. ಈಗಿನ ಮುಸ್ಲಿಂ ವ್ಯಕ್ತಿ ನಿಯಮದ ಪ್ರಕಾರ ಗಂಡನು ಮೂರು ಬಾರಿ 'ತಲಾಖ್' ಎಂದೊಡನೆ ವಿಚ್ಛೇದನ ಪೂರ್ಣಗೊಳ್ಳುತ್ತದೆ. ಆದರೆ ಹೆಂಡತಿಯಾದವಳಿಗೆ ವಿಚ್ಛೇದನ ಬೇಕಾದ ಸಂದರ್ಭದಲ್ಲಿ ಆಕೆ ಕೆಲವೊಮ್ಮೆ ವರ್ಷಾನುಗಟ್ಟಲೆ ನ್ಯಾಯಾಲಯಕ್ಕೆ ಅಲೆಯಬೇಕಾಗುತ್ತದೆ. ಹಿಂದೂ ನಿಯಮದ ಪ್ರಕಾರವೂ ವಿಚ್ಛೇದನಕ್ಕಾಗಿ ಸ್ತ್ರೀಪುರುಷರಿಬ್ಬರೂ ವರ್ಷಾನುಗಟ್ಟಲೆ ನ್ಯಾಯಾಲಯಕ್ಕೆ ಅಲೆಯಬೇಕಾದ ಪರಿಸ್ಥಿತಿ ಇದೆ. ಇಂತಹ ಕಾಯುವಿಕೆಯಿಂದ ಯಾರಿಗೂ ನೆಮ್ಮದಿ ಇರದು. ಇದಕ್ಕೆ ಬದಲಾಗಿ ನಾನು ಮೇಲೆ ವಿವರಿಸಿದ ಇಸ್ಲಾಂ ನಿಯಮದಂತೆ ವಿಚ್ಛೇದನ ಪಡೆದುಕೊಳ್ಳುವ ಸೌಲಭ್ಯ ದೊರೆತರೆ ಎಷ್ಟೋ ಹಿಂಸೆ, ದೌರ್ಜನ್ಯ,ಕೊಲೆಪಾತಕಗಳು ಕಮ್ಮಿಯಾಗಬಹುದೆಂಬುದು ನನ್ನ ಅಭಿಪ್ರಾಯ. ಕಠಿಣ ನಿಯಮಗಳಿಗಿಂತ ಸಡಿಲ ನಿಯಮಗಳೂ ಕೆಲವೊಮ್ಮೆ ಬದುಕಿನಲ್ಲಿ ಸಹಕಾರಿಯಾಗಬಲ್ಲುದು. ಈ ರೀತಿ ಎಲ್ಲ ನಿಯಮಗಳ ಕೊಡುಕೊಳ್ಳುವಿಕೆಯಿಂದೊಡಗೂಡಿದ ಹೊಚ್ಚ ಹೊಸ ನಿಯಮವೊಂದು ರೂಪಿತವಾದ ಸಂದರ್ಭದಲ್ಲಿ ಸಮಾಜದ ಕೆಲವೊಂದು ಬುದ್ಧಿಜೀವಿವರ್ಗಗಳಾದರೂ ಈ ಕುರಿತು ಚಿಂತನ ಮಂಥನ ನಡೆಸಬಹುದು.

ಮುಸ್ಲಿಂ ವ್ಯಕ್ತಿ ನಿಯಮದಿಂದ ಅತ್ಯಂತ ಸಂಕಷ್ಟಕ್ಕೀಡಾಗುವವರು ಮುಸ್ಲಿಂ ಮಹಿಳೆಯರು. ಆದುದರಿಂದ ತಮ್ಮ ನಿಯಮದ ಬದಲಾವಣೆಗಾಗಿ ಮುಸ್ಲಿಂ ಮಹಿಳೆಯರಿಂದಲೇ ಕೋರಿಕೆ ಬರಬೇಕು. ಈ ನಿಟ್ಟಿನಲ್ಲಿ ಅವರ ಮನ ಒಲಿಸುವ ಪ್ರಯತ್ನಗಳಾಗಬೇಕು.

ವಿಚ್ಛೇದನದ ಸಂದರ್ಭದಲ್ಲಿ ಹೆಂಡತಿಯಾದವಳಿಗೆ ಜೀವನಾಂಶ ದೊರೆಯಲೇ ಬೇಕು. ಮಕ್ಕಳ ಹಕ್ಕು ತಾಯಿಗೆ ದೊರೆಯಬೇಕು. ಭಾರತದ ಮಹಿಳೆಯರು ಆರ್ಥಿಕವಾಗಿ ಇನ್ನೂ ಹಿಂದುಳಿದಿರುವ ಕಾರಣ ಈ ಮಕ್ಕಳ ಖರ್ಚು ವೆಚ್ಚದ ಭಾರವನ್ನು ವಿಚ್ಛೇದನದ ಸಂದರ್ಭದಲ್ಲೂ ಆ ತಂದೆಯೇ ಹೊರುವಂತೆ ನಿಯಮಗಳು ರೂಪಿಸಲ್ಪಡಬೇಕು.

★ ★ ★ ★

# ಧರ್ಮದೊಳಗಿನ ಸಮಾನತೆ ಮೊದಲುಬೇಕು

ಕೆ. ಎಸ್. ವಿಮಲ, ರಾಜ್ಯ ಕಾರ್ಯದರ್ಶಿ, ಜನವಾದಿ ಮಹಿಳಾ ಸಂಘಟನೆ

1. ಪ್ರಸ್ತುತದಲ್ಲಿರುವ ಎಲ್ಲ ರೀತಿಯ ಭೇದ ಭಾವಗಳನ್ನು ತೊಡೆದುಹಾಕುವ, ಎಲ್ಲ ನಾಗರಿಕರಿಗೂ 'ಸಮಾನತೆ' ಯನ್ನು ನೀಡುವ ಸಂಹಿತೆ-ಸಮಾನ ನಾಗರಿಕ ಸಂಹಿತೆ, ಅಗತ್ಯವಾಗಿ ಬೇಕು.

2. ಎಲ್ಲರಿಗೂ ಏಕರೂಪವಾಗಿ ಅನ್ವಯವಾಗುವ ಕಾನೂನುಗಳ ರಚನೆಯಾಗಬೇಕು. ರಚನೆಯಾದ ಕಾನೂನು ಪರಿಣಾಮಕಾರಿಯಾಗಿ ಜಾರಿಯಾಗಬೇಕು. ಸಮಾನ ನಾಗರಿಕ ಸಂಹಿತೆಯ ಅರ್ಥ, ವ್ಯಾಪ್ತಿ, ಅವಶ್ಯಕತೆಯ ಕುರಿತು ಜನಜಾಗೃತಿ ಮೂಡಿಸಬೇಕು. ಹಂತ ಹಂತವಾಗಿ ಆಗುವ ಸಾಮಾಜಿಕ ಬದಲಾವಣೆ, ರಾಜಕೀಯ ಸಾಂಸ್ಕೃತಿಕ ಕ್ಷೇತ್ರಗಳ ಮೇಲೆ ಬೀರುವ ಪ್ರಭಾವ - 'ಸಮಾನ ನಾಗರಿಕ ಸಂಹಿತೆ'ಗೆ ಒಂದು ಸ್ಪಷ್ಟತೆಯನ್ನು ನೀಡುತ್ತದೆ.

3. ಸಮಾನ ನಾಗರಿಕ ಸಂಹಿತೆಯ ಹೆಸರಿನಲ್ಲಿ ಬಹುಸಂಖ್ಯಾತರ ಆಚರಣೆಗಳನ್ನು ಅಲ್ಪ ಸಂಖ್ಯಾತರ ಮೇಲೆ ಹೊರಿಸುವ ಪ್ರಯತ್ನ ನಡೆಯುತ್ತಿದೆ, ಮತ್ತು ಸಮಾನ ಸಿವಿಲ್ ಸಂಹಿತೆಯ ಕಲ್ಪನೆಯನ್ನು ರಾಜಕೀಯವಾಗಿ ದುರುಪಯೋಗ ಪಡಿಸಿಕೊಳ್ಳುವ ಪ್ರಯತ್ನ ಕೂಡ ನಡೆಯುತ್ತಿದೆ. ಒಂದು ಧರ್ಮದ, ಒಂದು ಕೋಮಿನ ಮಧ್ಯೆಯೇ ಸಮಾನತೆಗಳಿಲ್ಲದಿರುವಾಗ ಈಗ ಸಾಮಾನ್ಯವಾಗಿ ಕಲ್ಪನೆಯಲ್ಲಿರುವ 'ಸಮಾನ ಸಿವಿಲ್ ಸಂಹಿತೆ'ಗೆ ಯಾವ ಅರ್ಥವೂ ಇಲ್ಲ.

★ ★ ★ ★

## ತುರ್ತಿನ ಸವಾಲು

ಸ್ವಾತಂತ್ರ್ಯ ಬಂದ ಐದು ದಶಕಗಳಾದರೂ ಸಮಾನ ನಾಗರಿಕ ಜಾರಿಗಾಗಿ ಕಾಲ ಪಕ್ವವಾಗಿಲ್ಲವೆನ್ನುವುದು ಶೋಚನೀಯ ಸಂಗತಿಯೇ. ಸಮಾನ ನಾಗರಿಕ ಸಂಹಿತೆಯೊಂದು ಭಾರತದಲ್ಲಿ ಇಲ್ಲದಿರುವುದರಿಂದ ಪುರುಷರಿಗಿಂತ ಮಹಿಳೆಯರಿಗೇ ಹೆಚ್ಚು ಅನ್ಯಾಯವಾಗಿದೆ. ಇತ್ತೀಚಿಗೆ ಸುಪ್ರೀಂ ಕೋರ್ಟು ಸರ್ಕಾರಕ್ಕೆ ನೀಡಿರುವ ನಿರ್ದೇಶವನ್ನು ಪಕ್ಷರಾಜಕಾರಣವು ದುರುಪಯೋಗಪಡಿಸಿಕೊಳ್ಳುವುದಿಲ್ಲವೆಂದು ಹೇಳುವುದು ಹೇಗೆ? ಶಾಬಾನೋ ಪ್ರಕರಣವಾಗಲೀ, ಸತಿ ನಿಷೇಧದ ಕಾನೂನಿನ ಸಂದರ್ಭದಲ್ಲಾಗಲೀ ಮತರಾಜಕೀಯವು ಮಧ್ಯೆ ಪ್ರವೇಶಿಸಿ ಹೆಣ್ಣಿಗೆ ಸಾಮಾಜಿಕ ನ್ಯಾಯ ದೊರೆಯದಂತೆ ಮಾಡಿದ್ದು ಎಲ್ಲರೂ ಕಂಡ ಸತ್ಯವಾಗಿದೆ.

ಸಮಾನ ನಾಗರಿಕ ಸಂಹಿತೆಯ ಜಾರಿಯಾಗುವಿಕೆ ಕೇವಲ ಆಕರ್ಷಕ ಘೋಷಣೆಯಿಂದ ಸಾಧ್ಯವಿಲ್ಲ; ಆಳುವವರ ದೃಢವಾದ ರಾಜಕೀಯ ಸಂಕಲ್ಪವೂ ಇದಕ್ಕೆ ಬೇಕಿದೆ. ಪಕ್ಷರಾಜಕಾರಣ ಹಾಗೂ ಧಾರ್ಮಿಕ ಮೂಲಭೂತವಾದಿಗಳ ಹಿತಾಸಕ್ತಿಯನ್ನು ಧಿಕ್ಕರಿಸುತ್ತಲೇ ಸಮಾನ ನಾಗರಿಕ ಸಂಹಿತೆಯ ಹೋರಾಟ ಸಾಗಬೇಕಾಗಿದೆ.

ಹಲವಾರು ಸ್ವಾಯತ್ತ ಮಹಿಳಾ ಸಂಘಟನೆಗಳು ಸಮಾನ ನಾಗರಿಕ ಸಂಹಿತೆಯ ಅನ್ವಯ ಐಚ್ಛಿಕವಾಗಿರಬೇಕೆಂಬ ಅಂಶದ ಬಗ್ಗೆ ವಾದ ಮಂಡಿಸುತ್ತಿರುವುದು ಒಂದೆಡೆಯಾದರೆ, ಅತ್ಯಂತ 'ಸುಧಾರಿತ' ಬಹುಸಂಖ್ಯಾತ ಧರ್ಮದ ಮತೀಯ ಕಾನೂನುಗಳನ್ನು ಸಾರ್ವತ್ರಿಕವಾಗಿ ಅನ್ವಯಿಸುವಂತೆ ಒತ್ತಾಯಿಸುವ ಯತ್ನ ಮತ್ತೊಂದೆಡೆ ಇದೆ. ಇವೆರಡಕ್ಕೂ ಹೊರತಾದ ಮಾನವತೆ-ಸಾಮರಸ್ಯ-ಸಮಾನತೆಯನ್ನು ಗುರಿಯಾಗಿಟ್ಟುಕೊಂಡು ಸಮಾನ ನಾಗರಿಕ ಸಂಹಿತೆಯನ್ನು ಕಡ್ಡಾಯವಾಗಿ ಜಾರಿಯಾಗುವಂತೆ ಮಾಡುವ ಕೆಲಸ ಆಗಬೇಕಾಗಿದೆ. ಈ ವಿಷಯಗಳ ಬಗ್ಗೆ ಜನಸಾಮಾನ್ಯರಿಗೆ ತಿಳಿವು ಮೂಡಿಸುವ ಕಾರ್ಯವನ್ನು ಬುದ್ಧಿಜೀವಿಗಳು, ಪ್ರಗತಿಪರ ಸಂಘಟನೆಗಳು, ಮಹಿಳಾ ಸಂಘಟನೆಗಳು ಮಾಡಬೇಕಾದ್ದೇ ಇಂದಿನ ಅತ್ಯಂತ ತುರ್ತಿನ ಸವಾಲಾಗಿದೆ.

- ಅಚಲ

## ಹಾರ್ದಿಕ ಶುಭಾಶಯಗಳು



*ಗ್ರಾಮೀಣ ಮಹಿಳೆಯರ ಮುನ್ನಡೆಗಾಗಿ ಆರ್ಥಿಕ ಸ್ವಾವಲಂಬನೆಗಾಗಿ ಹೊಸ ಯೋಜನೆಗಳು:*

ಕೃಷಿ ಅಭಿವೃದ್ಧಿ, ಸಣ್ಣ ನೀರಾವರಿ, ಕೃಷಿ ಯಾಂತ್ರೀಕರಣ, ವೈವಿಧ್ಯಮಯ ಕಾರ್ಯಕ್ರಮ, ರೇಷ್ಮೆ ಅಭಿವೃದ್ಧಿ, ತೋಟಗಾರಿಕೆ, ಬೀಳು ಭೂಮಿ, ಅರಣ್ಯಾಭಿವೃದ್ಧಿ, ಮೀನುಗಾರಿಕೆ, ಪಶುಸಂಗೋಪನೆ, ಹೈನಿಗಾರಿಕೆ, ಕೃಷಿ ಆಧಾರಿತ ಮತ್ತು ಕೃಷಿಯೇತರ ಗ್ರಾಮೀಣ ಕೈಗಾರಿಕೆ, ಉದ್ಯಮ, ಕರಕುಶಲ ವಸ್ತುಗಳ ತಯಾರಿಕೆ ಮತ್ತು ಗುಡಿ ಕೈಗಾರಿಕೆಗಳಿಗೆ, ಕೃಷಿ ಸರಕು ಸಾಗಾಣಿಕೆ ವಾಹನ ಮತ್ತು ಗೃಹ ನಿರ್ಮಾಣ ಮುಂತಾದ ನೂರಾರು ಅಭಿವೃದ್ಧಿ ಕೆಲಸಗಳಿಗೆ ಕಡಿಮೆ ಬಡ್ಡಿ, ಸುಲಭ, ದೀರ್ಘಾವಧಿ ಸಾಲಗಳಿಗಾಗಿ

*ಹೆಚ್ಚಿನ ವಿವರ ತಿಳಿದುಕೊಳ್ಳಲು:*

ನಿಮ್ಮ ತಾಲ್ಲೂಕು ಪ್ರಾಥಮಿಕ ಸರಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕನ್ನು ಸಂದರ್ಶಿಸಿರಿ. ವಾಯಿದೆಯೊಳಗೆ ಕಂತು ಮರುಪಾವತಿಸಿರಿ. ಹೆಚ್ಚು ನೆರವು ನೀಡಲು ಅವಕಾಶ ಮಾಡಿಕೊಡಿರಿ.

| | | |
|---|---|---|
| **ಬಿ.ಎಸ್. ವಿಶ್ವನಾಥನ್** | **ಶರಣ ಬಸಪ್ಪ** | **ಉಷಾ ಗಣೇಶ್ ಐ.ಎ.ಎಸ್.** |
| ಅಧ್ಯಕ್ಷರು | ಕಾರ್ಯದರ್ಶಿ | ಕಾರ್ಯನಿರ್ವಾಹಕ ನಿರ್ದೇಶಕರು |

ಕರ್ನಾಟಕ ರಾಜ್ಯ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ, ಬೆಂಗಳೂರು-18.

# With best wishes





## from






# A Well-wisher

# ಬದಲಾಗುತ್ತಿರುವ ಸವಾಲುಗಳು

ಮಹಿಳಾ ದಶಕ ಕಳೆದ ಮೇಲೆ ಭಾರತದ ಸಾಂಸ್ಕೃತಿಕ ಸಂದರ್ಭದಲ್ಲಿ ಕಂಡುಬರುತ್ತಿರುವ ತೀವ್ರವಾದ ಏರುಪೇರುಗಳ ನಡುವೆ ಮಹಿಳೆಯರ ಸ್ಥಿತಿಗತಿಗಳನ್ನು ಚರ್ಚಿಸಿ ಸಮಕಾಲೀನ ಬದಲಾವಣೆಗಳ ಒಳಗತಿಯ ಸೆಲೆಗಳನ್ನು ಹಿಡಿದುಕೊಡುವಂಥ ವಿಶೇಷ ಲೇಖನಗಳಿಗಾಗಿ 'ಅಚಲ' ಅನೇಕ ವಿಚಾರಶೀಲರನ್ನು ಕೋರಿತ್ತು. ಈ ಕೋರಿಕೆಗೆ ಸ್ಪಂದಿಸಿದ ಹಲವಾರು ಚಿಂತಕರು ಕಳೆದ ಒಂದು ದಶಕದಲ್ಲಿ ಭಾರತೀಯ ಮಹಿಳೆಯರ ಬದಲಾಗುತ್ತಿರುವ ಪರಿಸ್ಥಿತಿ ಮತ್ತು ಪಾತ್ರಗಳನ್ನು ಮತ್ತು ಸಾಮಾಜಿಕ, ಶೈಕ್ಷಣಿಕ, ಸಾಹಿತ್ಯಕ, ಸಾಂಸ್ಕೃತಿಕ, ರಾಜಕೀಯ ಹಾಗೂ ಕಾನೂನುಗಳ ಕ್ಷೇತ್ರಗಳಲ್ಲಿ ಆಗುತ್ತಿರುವ, ಆಗಬೇಕಾಗಿರುವ ಪ್ರಗತಿಗಳ ಹಿನ್ನೆಲೆಯಲ್ಲಿ ಚರ್ಚಿಸಿದ್ದಾರೆ.

ಬದುಕಿನ ನಿರಂತರ ಚಲನಶೀಲ ಗತಿಯಲ್ಲಿ ಈ ಹೊತ್ತಿನ ಮುಖಕ್ಕೆ ದೊಂದಿಹಿಡಿಯ ಬಯಸುವ 'ಅಚಲ'ದ ಕಳಕಳಿಗೆ ಸ್ಪಂದಿಸಿದ ಈ ಎಲ್ಲರಿಗೆ ಅಚಲದ ಕೃತಜ್ಞತೆ ಸಲ್ಲುತ್ತದೆ.

– ಸಂ.

## ದಲಿತ-ಬಂಡಾಯ ಸಾಹಿತ್ಯ ಮತ್ತು ಮಹಿಳಾ ವಸ್ತು

– ಡಾ॥ ಪ್ರೀತಿ ಶುಭಚಂದ್ರ

ತೊಂಬತ್ತರ ದಶಕದ ಮಧ್ಯಭಾಗದಲ್ಲಿ ನಿಂತು ಎಂಬತ್ತರ ದಶಕದೆಡೆ ಕಣ್ಣು ಹಾಯಿಸಿದಾಗ ಬಹಳ ವಿಶಿಷ್ಟವಾದ ಸಾಹಿತ್ಯಕ ಸಂದರ್ಭವೊಂದು ನಮ್ಮೆದುರು ನಿಲ್ಲುತ್ತದೆ. ನಗರೀಕರಣ, ಯಂತ್ರನಾಗರಿಕತೆ ಹುಟ್ಟುಹಾಕುವ ಅತಿಭೌದ್ಧಿಕತೆಯ ನಿಮಿತ್ತದಿಂದುಂಟಾಗುವ ಬರಡುತನವನ್ನು ಪ್ರಜ್ಞಾಪೂರ್ವಕವಾಗಿ ನೀಗಿಕೊಳ್ಳುವ ಸಾಧನವಾಗಿ 'ಶೂದ್ರ ಪ್ರಜ್ಞೆ', 'ಸ್ತ್ರೀ ದೇಹ'ದ ವೈಭವೀಕರಣ ನವ್ಯರಲ್ಲಿ ಕಂಡುಬರುತ್ತದೆ. ನವ್ಯರ ಈ ಮಿತಿಯನ್ನು ಮೀರುವ ಪ್ರಯತ್ನವಾಗಿ ಬಂಡಾಯ ಸಾಹಿತ್ಯ ಸಂಘಟನೆಯು ಬಹಳ ಸ್ಪಷ್ಟವಾಗಿ ಪರ್ಯಾಯ ಸುಂಸ್ಕೃತಿ ನಿರ್ಮಾಣದ ಉದ್ದೇಶವನ್ನು ಹೊಂದಿತ್ತು. ಬಂಡವಾಳಶಾಹಿ ನಾಗರಿಕತೆಯ ನಿರ್ನಿಮಿತ್ತ ಕ್ರೌರ್ಯಕ್ಕೆ ಶಿಕಾರಿಯಾಗುವ ಆಧುನಿಕ ಮಾನವನ ದುರಂತವನ್ನು ನವ್ಯ ಸಾಹಿತ್ಯ ಪ್ರಧಾನವಾಗಿಟ್ಟುಕೊಂಡರೂ ಸಮಾಜದ ಎಲ್ಲ ಸ್ತರದ ಜನರ ಬದುಕನ್ನೂ ಒಳಗೊಳ್ಳುವಷ್ಟು ವಿಶಾಲವ್ಯಾಪ್ತಿ ಅದಕ್ಕೆ ಒದಗಲಿಲ್ಲ.

ಭಾರತದಂತಹ ಸಂದರ್ಭದಲ್ಲಿ ನಗರೀಕರಣದಿಂದಾದ ಒಂಟಿತನದ ನೋವಿಗಿಂತ ಬದುಕುವ ಮೂಲಭೂತ ಅವಶ್ಯಕತೆಗಳಿಂದ ವಂಚಿತವಾಗಿರುವ ದಲಿತ ಹಾಗೂ ಸ್ತ್ರೀ ವರ್ಗದ ಶೋಷಣೆ ಹೆಚ್ಚು ಭಯಾನಕವಾದರೂ ಸತ್ಯ. ಹೀಗಾಗಿ ನವ್ಯರ ಸಾಹಿತ್ಯದಲ್ಲಿನ ಹತಾಶೆ, ನೋವುಗಳು ಶೋಷಣೆಯ ತುದಿ ಮುಟ್ಟಿದ ವ್ಯಕ್ತಿಗಳನ್ನು ಗಮನದಲ್ಲಿಟ್ಟುಕೊಂಡಾಗ 'ಆತ್ಮರತಿ' ಎನಿಸದಿರದು. ನವ್ಯರ ಈ 'ನಾನು' ಕೇಂದ್ರವನ್ನು ಕೈ ಬಿಟ್ಟು ವ್ಯಕ್ತಿಗತ ದುರಂತವನ್ನು ಇಡೀ ಸಮುದಾಯದ ಶೋಷಣೆಯ ಭಾಗವಾಗಿ ಸ್ವೀಕರಿಸಿ, ಅರ್ಥೈಸಿಕೊಳ್ಳುವ ಕ್ರಮ ಬಂಡಾಯ ಹಾಗೂ ದಲಿತ ಸಾಹಿತ್ಯದಲ್ಲಿ ಕಂಡುಬರುತ್ತದೆ. 70-80ರ ದಶಕದ ಬಂಡಾಯ ಸಾಹಿತ್ಯ ಸಂದರ್ಭದಲ್ಲಿ ಶೋಷಿತ ವರ್ಗದ ದನಿಗೆ ಪ್ರಾಧಾನ್ಯ ಕೊಡಲಾಯ್ತು. ಶೂದ್ರ ಹಾಗೂ ದಲಿತ ವರ್ಗದೊಂದಿಗೆ ಸ್ತ್ರೀವರ್ಗವೂ ಶೋಷಿತವೆಂದು ಪರಿಗಣಿತವಾಯಿತು. ಹೀಗಾಗಿ ಸಹಜವಾಗಿಯೇ ಮಹಿಳಾ ಅಭಿವ್ಯಕ್ತಿಗೂ ಆ ಪಂಥದಲ್ಲಿ ವಿಶಿಷ್ಟ ಸ್ಥಾನವನ್ನು ಕಲ್ಪಿಸಿಕೊಡಲಾಯಿತು.

ಮಹಿಳಾ ಅಭಿವ್ಯಕ್ತಿಗೆ ಸಂಬಂಧಿಸಿದಂತೆ ಒಂದು ಅಂಶವನ್ನು ಗಮನಿಸಬೇಕು. ಆ ದಶಕದಲ್ಲಿ ಬರೆಯಲಾರಂಭಿಸಿದ ಸಮಕಾಲೀನ ಮಹಿಳಾ ಕವಿಯರನ್ನು ಬಂಡಾಯದ ಪ್ರವಾಹದಲ್ಲಿ ಗುರುತಿಸಲಾಯ್ತು. ಶೋಷಣೆಯ ವಿರುದ್ಧದ ನೇರವಾದ ಕೂಗಾಗಿ ನಿಲ್ಲುವ ದಲಿತ ಹಾಗೂ ಮಹಿಳಾ ಅಭಿವ್ಯಕ್ತಿಗೆ ಹೀಗಾಗಿ ಚಾರಿತ್ರಿಕ ಮಹತ್ವವಿದೆ. ಆದರೆ ಹೊಸ ಕನ್ನಡ ಮಹಿಳಾ ಸಾಹಿತ್ಯ ಪರಂಪರೆಯ ಆದ್ಯ ಪ್ರವರ್ತಕಿಯರಾದ ತಿರುಮಲೆ ರಾಜಮ್ಮ, ಆರ್. ಕಲ್ಯಾಣಮ್ಮ, ಬೆಳಗೆರೆ ಜಾನಕಮ್ಮ, ಸರಸ್ವತಿ ಬಾಯಿ ರಾಜವಾಡೆ ಮುಂತಾದವರ ಸಾಹಿತ್ಯಕ ಸಾಧನೆಯ ಬಗೆಗೆ ಮೌನ ಕಂಡುಬರುತ್ತದೆ. ಆದರೂ ಮಹಿಳಾ ವಸ್ತು ನಿರ್ವಹಣೆಯು ಬಂಡಾಯ ಸಾಹಿತ್ಯದ ಸಂದರ್ಭದಲ್ಲಿ ಹೊಸ ರೀತಿಯ ತಿರುವನ್ನು ಪಡೆದುಕೊಂಡಿತು. ಯಾವುದೇ ಪೂರ್ವಾಗ್ರಹಗಳಿಲ್ಲದ, ಶೋಷಣೆಯ ಬೇರುಗಳ ಸಂಕೀರ್ಣ ಲೋಕವನ್ನು ಓದುಗರೆದುರು ಇಡುವಲ್ಲಿ ಬಂಡಾಯ ಸಾಹಿತ್ಯ ಯಶಸ್ವಿಯಾಯಿತೆನ್ನಬಹುದು.

ಸ್ತ್ರೀ ಶೋಷಣೆಯ ವಸ್ತುವನ್ನು ದೇವನೂರು ಮಹಾದೇವ, ಬರಗೂರು ರಾಮಚಂದ್ರಪ್ಪ, ಮನಜ, ಚದುರಂಗ ಮುಂತಾದವರ ಕಾದಂಬರಿಗಳು ಅತ್ಯಂತ ವಸ್ತುನಿಷ್ಠವಾಗಿ ನಿರ್ವಹಿಸುತ್ತವೆ. ಸ್ತ್ರೀ

ಶೋಷಣೆಯ ಸಮಸ್ಯೆಯನ್ನೇ ಕೇಂದ್ರವಾಗಿಟ್ಟುಕೊಂಡು ಅದರ ಸುತ್ತ ದಲಿತ ಹಾಗೂ ಶೂದ್ರ ವರ್ಗದ ಪುರುಷ ಜಗತ್ತಿನ ಶೋಷಣೆಯ ಸ್ವರೂಪವನ್ನು ಚಿತ್ರಿಸುವುದು ಒಂದು ಸಾಹಿತ್ಯಕ ತಂತ್ರವಾಗಿ ಕೂಡ ಕಂಡುಬರುತ್ತದೆ. ಏಕೆಂದರೆ ಕೆಳಜಾತಿ ವರ್ಗಗಳ ಕೌಟುಂಬಿಕ ವಲಯದಲ್ಲಿ ದುಡಿಮೆಯ ಮೂಲಕ ಹೆಣ್ಣು ಪ್ರಧಾನಪಾತ್ರ ವಹಿಸುತ್ತಾಳೆ. ಇಂಥ ಸಂದರ್ಭದಲ್ಲಿ ಪುರುಷನೊಡನೆಯ ಸಮಾನ ಸ್ಥಾನಮಾನದ ಪ್ರಶ್ನೆ ಗೌಣವಾಗಿ ಬದುಕುವ ಮೂಲಭೂತ ಹೋರಾಟದಲ್ಲಿ ತನ್ನನ್ನು ತೊಡಗಿಸಿಕೊಳ್ಳುವುದೇ ಶೋಷಿತ ಸ್ತ್ರೀಗೆ ಮುಖ್ಯವಾಗುತ್ತದೆ. ದೇವನೂರು ಮಹಾದೇವರ 'ಒಡಲಾಳ'ದ ಸಾಕವ್ವನ ಆಲೋಚನೆ ಹಾಗೂ ಚಟುವಟಿಕೆಗಳು ಬದುಕಿನ ಹೋರಾಟದಲ್ಲಿ ತನ್ನನ್ನು ಕ್ರಿಯಾಶೀಲವಾಗಿ ತೊಡಗಿಸಿಕೊಳ್ಳುವ ಶೋಷಿತಸ್ತರದ ಜೀವಂತಿಕೆಯನ್ನು ಪ್ರತಿನಿಧಿಸುತ್ತದೆ. ಶೋಷಣೆಯ ಹಿಂದಿರುವ ಸಾಮಾಜಿಕ ಕಾರಣಗಳನ್ನು ವ್ಯಕ್ತಿಗತ ದುರಂತವಾಗಿ ಕಾಣದೆ ಸಾಮಾಜಿಕ ಅವನತಿಯ ಸಂಕೇತವಾಗಿ ಸ್ವೀಕರಿಸಿದಾಗ ನವ್ಯರ 'ಆತ್ಮರತಿ'ಯೂ ನವೋದಯದ 'ಆದರ್ಶಪರತೆ'ಯೂ ನಿರೂಪಣೆಯಲ್ಲಿ ಇಲ್ಲವಾಗುತ್ತವೆ.

ಮಹಾದೇವರ 'ಡಾಂಬರು ಬಂದುದು' ಕತೆಯ 'ಹೊಸೂರ ಹೊಸ ಮಾತು' ಭಾಗ ಬಹಳ ಸೂಕ್ಷ್ಮವಾಗಿ ಶೋಷಣೆಯ ವಿರುದ್ಧ ಅಸ್ತ್ರವಾಗಿ ಹೆಣ್ಣಿನ ಅಂತಸ್ಸತ್ವವನ್ನು ಸ್ಫೂರ್ತಿಕೇಂದ್ರವಾಗಿ ಬಳಸಿಕೊಳ್ಳಬಹುದಾದ ಸಾಧ್ಯತೆಯನ್ನು ಸೂಚಿಸುತ್ತದೆ. ನಗರೀಕರಣದ ಪ್ರಕ್ರಿಯೆಗೆ ಒಳಗಾಗುವ ಗ್ರಾಮಸಮುದಾಯದ ದುಡಿವ ವರ್ಗದ ಪ್ರತಿಭಟನೆ ಮೂರ್ತಸ್ವರೂಪವನ್ನು ಪಡೆವ ಪ್ರಕ್ರಿಯೆ ಈ ಕತೆಯಲ್ಲಿ ವಿಶಿಷ್ಟವಾಗಿದೆ. 'ತುಂಡು ಹೈಕಳ ಕೆಡಿಸುವ' ಹೊಸೂರ ಹೆಣ್ಣು ಪಂಚಾಯಿತಿ ಕಟ್ಟೆಯ ತೀರ್ಮಾನದಂತೆ ಹುಟ್ಟುಡುಗೆಯಲ್ಲಿ ಹುಣಿಸೆ ಬರಲಿನ ಏಟು ತಿನ್ನುತ್ತಾಳೆ. ಆದರೆ ಆಕೆ ಅಷ್ಟಕ್ಕೆ ಸುಮ್ಮನಿರದೆ ಪೋಲೀಸರಲ್ಲಿ ದೂರು ನೀಡುತ್ತಾಳೆ. ಆ ವ್ಯವಸ್ಥೆ ಕೂಡ ಆಕೆಯ ಪರವಾಗಿ ಸಹಾನುಭೂತಿಯುಳ್ಳದ್ದಾಗೇನೂ ಇರುವುದಿಲ್ಲ. ಅಲ್ಲಿ ಆಕೆ 'ಬಿಚ್ಚಿಬಿಚ್ಚಿ' ಹೇಳಿಕೊಳ್ಳುತ್ತಾಳೆ. ತನ್ನ ಹೆಣ್ತನದ ಪ್ರಯೋಜನ ಪಡೆದುಕೊಂಡೇ ಹಟ್ಟಿಯ ಯಜಮಾನರನ್ನು ಕೂಡ ಬಂಧಿಸುವಲ್ಲಿ ಯಶಸ್ವಿಯಾಗುತ್ತಾಳೆ. ಅರ್ಧರಾತ್ರಿಯ ಹೊತ್ತಲ್ಲು ಹಟ್ಟಿಯ ಬಾಗಿಲು ಬಡಿದು ಹೋದ ಈ ಸುದ್ದಿಯು ಅನಿರೀಕ್ಷಿತ ಪರಿಣಾಮವನ್ನು ಆ ಗ್ರಾಮದಲ್ಲಿ ಬೀರುತ್ತದೆ. ರಸ್ತೆಗೆ ಡಾಂಬರು ಮಾಡಿಸುವ ಕಂಟ್ರಾಕ್ಟ್ ಹಿಡಿದ ಪಟೇಲನ ವಿರುದ್ಧ ನೇರ ಪ್ರತಿಭಟನೆಯ ಸಂಕೇತವಾಗಿ ಡ್ರಮ್ಮಿನ ಡಾಂಬರನ್ನೆಲ್ಲ ಗುಂಡಿಗೆ ಉರುಳಿಸಲಾಗುತ್ತದೆ. ಶೋಷಣೆಯ ಅತ್ಯಂತ ಅಧಿಕ ಸ್ತರದಲ್ಲಿರುವ ಹೆಣ್ಣಿಗೆ ಅನ್ಯಾಯದ ವಿರುದ್ಧ ಪ್ರತಿಭಟಿಸುವ ಕೆಚ್ಚು ಇರುವುದಾದಲ್ಲಿ ಅದರ ನಂತರದ ಶೋಷಣೆಯ ಸ್ತರದಲ್ಲಿರುವ ಪುರುಷ ವರ್ಗಕ್ಕೆ ಮೂರ್ತ ಹೋರಾಟದಲ್ಲಿ ತನ್ನನ್ನು ತೊಡಗಿಸಿಕೊಳ್ಳದೆ ವಿಧಿಯೇ ಇಲ್ಲವಾಗುತ್ತದೆ. ಏಕೆಂದರೆ ಶೋಷಣೆಯ ಅತ್ಯಂತ ಎತ್ತರದ ನೆಲೆಯ ವ್ಯಕ್ತಿಗಳಿಗೆ, ತತ್‌ಕ್ಷಣದ ಕ್ರಿಯೆಯಲ್ಲಿ ತೊಡಗಿಸಿದರೆ ಮಾತ್ರ ಜೀವದಿಂದಿರುವ ಏಕಮಾತ್ರ ಅವಕಾಶವಿರುತ್ತದೆ. ಅದಕ್ಕೆ ಹೊರತಾಗಿ ಯಾವುದೇ ರೀತಿಯ ರಾಜಿಗಳನ್ನು ಮಾಡಿಕೊಳ್ಳಬಲ್ಲ ಅವಕಾಶಗಳ ಸಾಧ್ಯತೆಗಳೇ ಅವರಿಗಿಲ್ಲವಾಗುತ್ತದೆ. ಈ ಅವಕಾಶ ರಾಹಿತ್ಯತೆಯೇ ಹೋರಾಟದ ಸಾಧನವೂ ಆಗುತ್ತದೆ. ಸಾವಿನ ಹಂಗು ತೊರೆದಾಗ ವಾಸ್ತವ ಸನ್ನಿವೇಶದಲ್ಲಿ ಯಾವುದೇ ರೀತಿಯ ವ್ಯವಸ್ಥೆಯ ಅಧಿಕಾರ ಶಕ್ತಿಗಳನ್ನು ಎದುರಿಸುವ ಧೈರ್ಯ ಒದಗುತ್ತದೆ. ಕುಂ. ವೀರಭದ್ರಪ್ಪನವರ 'ದೇವರ ಹೆಣ' ಕತೆಯ ಹೆಣ್ಣಿನ ಪಾತ್ರ ವ್ಯಕ್ತಪಡಿಸುವ ಧೈರ್ಯ ಇಂಥದ್ದು. ಹೀಗಾಗಿ ಸ್ತ್ರೀ ಶೋಷಣೆ ಅಥವಾ ದಲಿತ ಪುರುಷ ಶೋಷಣೆಯ ನಿರೂಪಣೆಯು ನವ್ಯರ ಅಸ್ತಿತ್ವವಾದಿ ಹುಡುಕಾಟದ ದುರಂತತೆಯನ್ನು ವ್ಯಕ್ತಪಡಿಸುವುದಿಲ್ಲ. ಅದಕ್ಕೆ ಬದಲಾಗಿ ವೈನೋದಿಕ ಅಣಕು ಶೈಲಿಯನ್ನು ಹೊಂದಿದೆ.

ವೈದೇಹಿಯವರ 'ಅಕ್ಕು' ಕತೆಯ ನಾಯಕಿಯ ಹುಚ್ಚು ಕೂಡ ಇದೇ ನೆಲೆಯದು. ಅನ್ಯಾಯದ ವಿರುದ್ಧದ ಹೋರಾಟಕ್ಕೆ ಅಹಿಂಸೆಯನ್ನೂ ಸಾಧನವಾಗಿ ಬಳಸಿಕೊಳ್ಳುವ ಗಾಂಧಿವಾದದ ಮಿತಿಯನ್ನು ಮೀರುವ ಪ್ರಯತ್ನವನ್ನು ದಲಿತ ಬಂಡಾಯ ಸಾಹಿತ್ಯದಲ್ಲಿ ಕಾಣುತ್ತೇವೆ. ಏಕೆಂದರೆ ಹೋರಾಟದ ಅಸ್ತ್ರವನ್ನು 'ಸಾಧನೆ'ಯ ಮೂಲಕ ರೂಪಿಸಿಕೊಳ್ಳಬೇಕಾದ ಪ್ರಯತ್ನದ ಅವಶ್ಯಕತೆ ಶೋಷಿತ ಸ್ತ್ರೀ ಪುರುಷರಿಗೆ ಒದಗುವುದಿಲ್ಲ. ಬದುಕಿನ ಚಾರಿತ್ರಿಕ ಗತಿತಾರ್ಕಿಕತೆಯೇ ಹೋರಾಟಕ್ಕೆ ಅತ್ಯಗತ್ಯವಾದ ಧೈರ್ಯವನ್ನು ಸಹಜವಾಗಿ ಪ್ರಕಟಪಡಿಸುವ ಪರಿಯನ್ನು ನಾವು ಕಾಣುತ್ತೇವೆ. ಮಹಿಳಾ ಬಿಡುಗಡೆಯನ್ನು ಅಧಿಕಾರ ಕೇಂದ್ರದ ನೆಲೆಯ ಕಾನೂನಿನ ವ್ಯಾಪ್ತಿಯಲ್ಲಿ ತರುವ ಪ್ರಯತ್ನಗಳ ಇತಿ-ಮಿತಿಗಳೇನೇ ಇರಲಿ, ನಿತ್ಯ ದೈನಿಕದಲ್ಲಿ ಮಹಿಳೆ ತನ್ನನ್ನು ತೊಡಗಿಸಿಕೊಳ್ಳುವ ಕ್ರಮದ ಅರ್ಥಪೂರ್ಣ ಎಚ್ಚರವೇ ಶೋಷಣೆಯಿಂದ ವಿಮೋಚನೆಯೆಡೆಗೆ ಕೊಂಡೊಯ್ಯಬಲ್ಲ ಶಕ್ತಿಯಾಗಿ ಗುರುತಿಸಲ್ಪಟ್ಟಿದೆ.

★ ★ ★ ★

ಸವಾಲು

## ಸಮಕಾಲೀನ ಕನ್ನಡ ಮಹಿಳಾ ಸಾಹಿತ್ಯ

- ಆಶಾ

ಎಪ್ಪತ್ತರ ದಶಕದ ನವ್ಯೋತ್ತರ ಕನ್ನಡ ಸಾಹಿತ್ಯ ಸಂದರ್ಭವನ್ನು ಸಮಕಾಲೀನ ಸಾಹಿತ್ಯವೆಂದು ಗುರುತಿಸಬಹುದು. ನವೋದಯ, ನವ್ಯ, ಪ್ರಗತಿಶೀಲ - ಹೀಗೆ ಹಲವಾರು ಸಾಹಿತ್ಯ ಚಳುವಳಿಗಳ ಅನುಭವವನ್ನು ಬೆನ್ನಿಗಿರಿಸಿಕೊಂಡಿರುವ ಈ ಸಾಹಿತ್ಯ ಘಟ್ಟ ಕನ್ನಡ ಸಾಹಿತ್ಯ ಇತಿಹಾಸದಲ್ಲೇ ವಿಶಿಷ್ಟವಾದದ್ದು. ಸಾಹಿತ್ಯಕ ಒಟ್ಟು ಪ್ರಕ್ರಿಯೆ ಹೆಚ್ಚು ಸಾಂಸ್ಕೃತಿಕ ಆಯಾಮಗಳನ್ನು ಪಡೆದುಕೊಂಡದ್ದು ಈ ಸಂದರ್ಭದಲ್ಲಿ. ವ್ಯಕ್ತಿಯ ನೆಲೆಯಿಂದ ಹೆಚ್ಚು ಸಮಾಜ ಮುಖಿಯಾದ ಹಾಗೂ ಸಾಮೂಹಿಕ ಪ್ರಕ್ರಿಯೆಯಾಗಿ ರೂಪುಗೊಳ್ಳುತ್ತಾ ಸೃಷ್ಟಿಯಾದ ಈ ಸಮಕಾಲೀನ ಸಾಹಿತ್ಯ ಕಾಲಗರ್ಭದಲ್ಲಿ ಕಂಡಿರದ ಹಲವಾರು ಅಪರಿಚಿತ, ಅಜ್ಞಾತ ಅನುಭವಲೋಕಗಳನ್ನು ತೆರೆದಿಡುತ್ತಿದೆ. ಸಮಾಜದ ಮುಖ್ಯ ಪ್ರವಾಹದಿಂದ ಅಂಚಿಗೆ ನೂಕಲ್ಪಟ್ಟ, ಪರಿಶಿಷ್ಟಗಳಾಗಿ ಉಳಿದ ಜನಸಮುದಾಯವು ರಚಿಸಿದ ಸಾಹಿತ್ಯಧಾರೆಗಳು ಈ ಕಾಲದ ಸಾಹಿತ್ಯ ಸಂಪದಗಳಾಗಿವೆ. ಈ ಸಂದರ್ಭದಲ್ಲಿ ಹುಟ್ಟಿಕೊಂಡ ದಲಿತ-ಬಂಡಾಯ ಚಳುವಳಿಗಳಿಂದಾಗಿ ಕೆಳಜಾತಿಯ, ಕೆಳವರ್ಗದ ನೋವು, ನಲಿವುಗಳು ಅವರದೇ ಲೇಖನಿಯಲ್ಲಿ ಹೊರಬೀಳಲು ಸಾಧ್ಯವಾಯಿತು. ಹಾಗೆಯೇ ಅಜ್ಞಾತರಾಗಿ ಉಳಿದಿದ್ದ ಮುಸ್ಲಿಂ ಸಮುದಾಯದ ಅನುಭವಪ್ರಪಂಚ ಮುಸ್ಲಿಂ ಲೇಖನಿಯಲ್ಲಿ ಬಿಚ್ಚಿಕೊಳ್ಳತೊಡಗಿತು. ಹೆಣ್ಣಿನ ಅನುಭವವೂ ಇದೇ ಹಿನ್ನೆಲೆಯಲ್ಲಿ ಹೊಸರೂಪ ಪಡೆಯಿತು.

ಕನ್ನಡ ಸಾಹಿತ್ಯ ಚರಿತ್ರೆಯ ಈ ನಿರ್ದಿಷ್ಟ ಕಾಲ ಘಟ್ಟದಲ್ಲಿ ಹಿಂದೆಂದಿಗಿಂತ ಹೆಚ್ಚಾಗಿ ಇಂದು ಸಂಖ್ಯೆಯಲ್ಲಿ ಮತ್ತು ಗುಣದಲ್ಲಿ ಹೆಣ್ಣಿನ ಸಾಹಿತ್ಯ ಕೃಷಿ ನಡೆದಿದೆ. ಈ ಲೇಖಕಿಯರ ಸಾಹಿತ್ಯ ನಮ್ಮ ಸಾಂಸ್ಕೃತಿಕ, ಕೌಟುಂಬಿಕ, ಆರ್ಥಿಕ, ಸಾಮಾಜಿಕ ವಲಯಗಳ ಕೆಲವು ಮೂಲಭೂತ ವಿಚಾರ, ನಂಬಿಕೆಗಳನ್ನು ಎದ್ದು ಕಾಣುವಂತೆ ಪ್ರಶ್ನಿಸುತ್ತಿದೆ; ಮಹಿಳಾ ದೃಷ್ಟಿಕೋನವನ್ನು ಪುರಾಣೇತಿಹಾಸವಾಗಿ ಕೊಡುವ ಕೆಲಸವನ್ನು ಮಾಡಿದೆ. ಆ ಮೂಲಕ ಹಳೆಯ ಮೌಲ್ಯ ಪದ್ಧತಿಯ ಬಗ್ಗೆ ತನ್ನ ಪ್ರತಿಭಟನೆಯನ್ನು, ಸ್ವಸಮರ್ಥನೆಯನ್ನು ತೋರಿದೆ.

ಮಹಿಳಾ ಜಾಗೃತಿ, ಮಹಿಳಾ ಚಳುವಳಿಯಿಂದಾಗಿ ಎಚ್ಚೆತ್ತ ಜಾಗೃತ ಸ್ತ್ರೀಪ್ರಜ್ಞೆಯು ಲೇಖಕಿಯರ ಕೃತಿಗಳಲ್ಲಿ ಅಭಿವ್ಯಕ್ತಗೊಂಡಿತು. ನವೋದಯ ಕಾಲದಿಂದಲೂ ಬರೆಯುತ್ತ ಬಂದ ಎಚ್.ವಿ. ಸಾವಿತ್ರಮ್ಮ ಮತ್ತು ಪ್ರಗತಿಶೀಲ ಚಳುವಳಿಯ ಸಂದರ್ಭದಲ್ಲಿ ಬರವಣಿಗೆಗೆ ತೊಡಗಿದ ಡಾ. ಅನುಪಮಾ ನಿರಂಜನರವರು ಈ ಸಂದರ್ಭದಲ್ಲಿ ಹೊಸಕಾಲದ ಮೌಲ್ಯಗಳಿಗೆ ಸ್ಪಂದಿಸುತ್ತಾ ತಮ್ಮ ವೈಚಾರಿಕ ನೆಲೆಗಟ್ಟನ್ನೇ ಈ ಕಾಲದಲ್ಲಿ ಬದಲಾಯಿಸಿಕೊಂಡರು ಎಂಬುದು ಮಹತ್ವದ ಬೆಳವಣಿಗೆಯಾಗಿದೆ.

ಎಂಭತ್ತರ ದಶಕದಲ್ಲಿ ಎಚ್.ವಿ. ಸಾವಿತ್ರಮ್ಮ ರಚಿಸಿರುವ 'ಸೀತೆ, ರಾಮ, ರಾವಣ' ಮತ್ತು 'ವಿಮುಕ್ತಿ' ಕಾದಂಬರಿಗಳು ರಾಮಾಯಣದ ಮೂಲಕ ಪಿತೃಪ್ರಧಾನ ವ್ಯವಸ್ಥೆಯ ನೂರಾರು ರಾಜಕೀಯಗಳನ್ನು, ಅಲ್ಲಿನ ಸ್ತ್ರೀಯರ ಅನುಭವಗಳ ಮೂಲಕ ನೋಡಿದ ಹೊಸ ಪ್ರಯತ್ನಗಳಾಗಿವೆ. ಡಾ. ಅನುಪಮಾ ನಿರಂಜನರವರು ಹೆಣ್ಣಿನ ಬೌದ್ಧಿಕತೆ, ವೈಚಾರಿಕತೆ, ಪರಿಶ್ರಮ, ನಿಷ್ಠೆ, ಜೀವನಪರತೆಗಳಿಗೆ ಮೌಲಿಕತೆಯನ್ನು ತಂದುಕೊಡುವುದಕ್ಕಾಗಿ ಹಲವಾರು ಸ್ತ್ರೀ ಪಾತ್ರಗಳನ್ನು ಸೃಷ್ಟಿಸಿದ್ದಾರೆ. ಸಮಕಾಲೀನ ಸ್ತ್ರೀ ಸಂವೇದನೆಗೆ ಅಭಿವ್ಯಕ್ತಿ ನೀಡಲು ಹವಣಿಸಿದರಲ್ಲದೆ, ಬಹಿರಂಗದ ಬದುಕಿನಲ್ಲೂ ಸ್ತ್ರೀವಾದಿ ಚಟುವಟಿಕೆಗಳೊಂದಿಗೆ ಸ್ಪಷ್ಟವಾಗಿ ತಮ್ಮನ್ನು ಗುರುತಿಸಿಕೊಂಡರು.

ನವ್ಯ ಲೇಖಕರೆಲ್ಲರೂ ಸ್ವಂತ ಅನುಭವದ ಶೋಧನೆಯಲ್ಲಿ ತೀವ್ರವಾಗಿ ತೊಡಗಿ ಸಾಹಿತ್ಯ ರಚಿಸುತ್ತಿದ್ದ ಸಂದರ್ಭದಲ್ಲಿ ವೀಣಾ ಅವರು ವ್ಯಕ್ತಿಯಾಗಿ ಹೆಣ್ಣಿನ ಅನುಭವಗಳ ನೆಲೆಯಿಂದ ನಾಗರಿಕ ಮಧ್ಯಮವರ್ಗದ ಜನರ ಬದುಕಿನ ಶೋಧನೆಗೆ ಯತ್ನಿಸಿದ್ದು ವಿಶೇಷವಾಗಿತ್ತು. ಪುರುಷಪ್ರಧಾನ ವ್ಯವಸ್ಥೆಯನ್ನು ಸುಶಿಕ್ಷಿತ ಸ್ತ್ರೀಸಂವೇದನೆಗಳ ಮೂಲಕ ಗ್ರಹಿಸುತ್ತ, ಅನುಭವದ ವ್ಯಕ್ತಿನಿಷ್ಠ ನೆಲೆಯಿಂದಲೇ ಮಹಿಳೆಯರ ಮಾನಸಿಕ ತೊಳಲಾಟಗಳನ್ನು ಶೋಧಿಸುವ ಯತ್ನವನ್ನು ವೀಣಾ ಅವರ ಕಥೆ, ಕಾದಂಬರಿಗಳಲ್ಲಿ ಕಾಣಬಹುದು. ವಿಶೇಷವಾಗಿ 'ಗಂಡಸರು' ಮತ್ತು 'ಶೋಷಣೆ, ಬಂಡಾಯ, ಇತ್ಯಾದಿ ...' ಕೃತಿಗಳಲ್ಲಿ ಸ್ವತಃ ವೀಣಾ ಸೃಜನಶೀಲ ಹುಡುಕಾಟದಲ್ಲಿ ವಾಸ್ತವಕ್ಕೆ ತಲೆಬಾಗುವ ಒಂದು ಸ್ಥಿತಿಯನ್ನು ಗುರುತಿಸಲು ಸಾಧ್ಯ.

ವೀಣಾರವರ ವ್ಯಕ್ತಿನಿಷ್ಠ ಶೋಧನೆ, ತಂತ್ರಗಳು ಅವರಂಥ ಲೇಖಕಿಯರ ಪರಂಪರೆಯನ್ನೇನೂ ಸೃಷ್ಟಿಸಲಿಲ್ಲ. ಆದರೆ ಅನುಭವವನ್ನು ಬಿಚ್ಚಿಡಬಲ್ಲ ನಿರ್ಭೀತಸ್ವರವೊಂದನ್ನು ಅವರ ಕತೆಗಳು ಸೃಷ್ಟಿಸಿದ್ದು ನಿಜ. ಬಂಡಾಯ-ದಲಿತ ಸಾಹಿತ್ಯ ಚಳುವಳಿಯ ಸಂದರ್ಭದಲ್ಲಿ ಸಾಹಿತ್ಯ ಲೋಕದಲ್ಲಿ ಹೊಸದೊಂದು ಅನುಭವ ಲೋಕವನ್ನು ಪರಿಚಯಿಸಿದ ಸಾರಾ ಅಬೂಬಕ್ಕರ್ ಮುಸ್ಲಿಂ ಹೆಣ್ಣಿನ ನೋವು, ನಲಿವುಗಳಿಗೆ ತಮ್ಮ ಕಾದಂಬರಿಗಳಲ್ಲಿ ಪ್ರತಿಸ್ಪಂದಿಸಿದ್ದಾರೆ. ಅವರ 'ಚಂದ್ರಗಿರಿಯ ತೀರದಲ್ಲಿ' ಸಾಂಪ್ರದಾಯಿಕ ಆಚರಣೆಗೆ ಸಿಲುಕಿದ ಹೆಣ್ಣಿನ ನೋವಿನ ಕತೆ, ಅವರ 'ಸಹನಾ' ಮತ್ತು 'ವಜ್ರಗಳು' ಕಾದಂಬರಿಗಳಲ್ಲಿ ಮಹಿಳೆ ತನ್ನ ದೇಹ ಮನಸ್ಸುಗಳ ಮೇಲಿನ ತನ್ನ ಹಕ್ಕನ್ನು ಮತ್ತೆ ಸ್ಥಾಪಿಸಿಕೊಳ್ಳುವ ದಿಕ್ಕಿನ ಹೋರಾಟವಾಗಿದೆ.

ಮತ್ತೊಬ್ಬ ಕತೆಗಾರ್ತಿ ಶ್ರೀಮತಿ ವೈದೇಹಿಯವರು ಸ್ತ್ರೀ ಸಂವೇದನೆಯ ಮೂಲಕ ಭಾವನಿರ್ಭರವಾದ ಕಾವ್ಯಮಯ ಭಾಷೆಯಲ್ಲಿ ಇಡೀ ಸಂಸ್ಕೃತಿಯ ಶೋಧಕ್ಕೆ ತೊಡಗುತ್ತಾರೆ. ಬಿರುಕು

ಬಿಟ್ಟಿರುವ ಮಾನವನ ದುರವಸ್ಥೆಗೆ ಮನುಕುಲದ ಅರ್ಧ ಜನಾಂಗವನ್ನು ಹತ್ತಿಕ್ಕಿರುವುದು ಹೇಗೆ ಕಾರಣವಾಗಿದೆ ಎನ್ನುವ ಪ್ರಶ್ನೆ ಇವರನ್ನು ಕಾಡುತ್ತದೆ. ತಮ್ಮ ಪ್ರಾದೇಶಿಕ ಭಾಷಾ ವೈಶಿಷ್ಟ್ಯತೆಯಿಂದಲೇ ಗ್ರಾಮೀಣ ಬದುಕಿನ ಒಳ ಹೊರಗುಗಳನ್ನು ತೆರೆದಿಡುತ್ತಾರೆ. ಮಲೆನಾಡಿನ ಬದುಕಿನ ಅನುಭವದ ದಟ್ಟತೆಯು ವೈದೇಹಿಯವರ ಕತೆಗಳಲ್ಲಿ ಹೆಣ್ಣಿನ ಉಪಸಾಂಸ್ಕೃತಿಕ ನೆಲೆಯ ಸೂಕ್ಷ್ಮಸ್ತರಗಳ ಶೋಧನೆಗೆ ಅನುವು ಮಾಡಿಕೊಡುತ್ತದೆ. ಅದೇ ಪ್ರಾದೇಶಿಕ ನೆಲೆಯಿಂದ ಬರೆಯುವ ಭಾಗೀರಥಿ ಹೆಗಡೆ, ಸಮಕಾಲೀನ ವಸ್ತುಗಳನ್ನು ಆಯ್ದುಕೊಳ್ಳುತ್ತ, ಮಾನವತ್ವದ ಅನಂತ ಸಮಸ್ಯೆಗಳ ಪದರಗಳನ್ನು ಕಾಣಿಸಲು ಯತ್ನಿಸುವುದು ಗಮನಾರ್ಹವಾಗಿದೆ.

ನಗರ ಸಂಸ್ಕೃತಿಯ ಹಿನ್ನೆಲೆಯಲ್ಲಿ, ಗಂಡು ಹೆಣ್ಣಿನ ಸಂಬಂಧ ಮತ್ತು ಅದರಲ್ಲಿ ಹುಟ್ಟುವ ಸಮಸ್ಯೆಗಳು - ಇವು ಕತೆಗಾರ್ತಿ ನೇಮಿಚಂದ್ರರ ಕತೆಗಳ ವಸ್ತು. ತಾಯ್ತನ, ಪಾತಿವ್ರತ್ಯ ಮುಂತಾದ ಸಾಂಪ್ರದಾಯಿಕ ಮೌಲ್ಯಗಳನ್ನು ಪ್ರಶ್ನಿಸುವ ಇವರ ಕತೆಗಳು ವಿವಾಹ ಸಂಸ್ಥೆಯ ಅಭದ್ರತೆಯ ಕಡೆಗೆ ಗಮನ ಸೆಳೆಯುತ್ತವೆ. ಇತ್ತೀಚಿನ ಕತೆಗಾರ್ತಿಯರಲ್ಲಿ ಭರವಸೆ ಹುಟ್ಟಿಸುವ ಎಂ.ಎಸ್.ವೇದಾ ಅವರ ಕತೆಗಳಲ್ಲಿ ಪ್ರಾದೇಶಿಕ ಆಡುಭಾಷೆಯ ಸತ್ವಯುತ ಬಳಕೆಯ ಪ್ರಯೋಗಗಳಲ್ಲಿ ತೊಡಗಿದ್ದು ಅನುಭವವನ್ನು ವಸ್ತುನಿಷ್ಠವಾಗಿಸಲು ನವುರು ಹಾಸ್ಯವನ್ನು ಬಳಸುವ ವಿಶಿಷ್ಟ ಕ್ರಮವಿದೆ. ಹೆಣ್ಣಿನ ಬದುಕಿನ, ಅಂತರಂಗದ ಸೂಕ್ಷ್ಮಸ್ತರಗಳನ್ನು ಧ್ವನಿಸಬಲ್ಲ, ಕಲಾತ್ಮಕ ಎಚ್ಚರವುಳ್ಳ, ಭರವಸೆ ಹುಟ್ಟಿಸುವ ಕತೆಗಾರ್ತಿಯರು ಪ್ರಕಟವಾಗಿರುವುದು ಈ ದಶಕದ ಬಹುಮುಖ್ಯ ಬೆಳವಣಿಗೆ ಎನ್ನಬಹುದು. ಆದರೆ ಕಾದಂಬರಿ, ನಾಟಕ ಮುಂತಾದ ವಿಶಾಲ ಸಾಹಿತ್ಯ ಪ್ರಕಾರಗಳಲ್ಲಿ ಇನ್ನೂ ಈ ಬದಲಾದ ತುಡಿತಗಳು, ಹುಡುಕಾಟಗಳು ಅಷ್ಟಾಗಿ ತೀವ್ರವಾಗಲಿಲ್ಲ ಎನ್ನುವುದು ಕುತೂಹಲಕಾರಿ.

ಎಪ್ಪತ್ತರ ದಶಕದಲ್ಲಿ ಲೇಖಕಿಯರಲ್ಲಿ ವೈಯಕ್ತಿಕತೆಯ ತೀವ್ರತೆ ಹೆಚ್ಚು ಅಭಿವ್ಯಕ್ತವಾಗಿರುವುದು ಕಾವ್ಯ ಮಾಧ್ಯಮದಲ್ಲಿ. ಸಂವೇದನಾಶೀಲರಾದ ಹಾಗೂ ಸೃಜನಾತ್ಮಕತೆಯನ್ನು ಹೊಂದಿದ ಹಲವಾರು ಮಹಿಳೆಯರು ಕಾವ್ಯಸೃಷ್ಟಿಯಲ್ಲಿ ತೊಡಗಿದರು. ಬದುಕಿನೊಂದಿಗೆ ತಾದಾತ್ಮ್ಯ ಹೊಂದುವುದರ ಜೊತೆಗೇ ಬದುಕನ್ನು ಬಗೆಯುವ ಕ್ರಿಯೆಯಲ್ಲಿ ತೊಡಗಿದ ಮಹಿಳೆ ತನ್ನ ದುರಂತದ ಶೋಷಣೆಯ ಬೀಜಗಳನ್ನು ನಮ್ಮ ಪರಂಪರೆಯಲ್ಲಿ, ಮನು ಸಂಸ್ಕೃತಿಯಲ್ಲಿ ಗುರುತಿಸಿದಳು. ಪರಂಪರಾಗತವಾಗಿ ಬಂದ ಆದರ್ಶ ಸ್ತ್ರೀಮಾದರಿಗಳನ್ನು ಭಗ್ನ ಮಾಡುವ ಕ್ರಿಯೆಯಲ್ಲಿ ಆಧುನಿಕ ಕವಯಿತ್ರಿಯರು ತೊಡಗಿದ್ದಾರೆ. ಸೀತೆ, ಅಹಲ್ಯೆಯರು 'ತಪ್ಪಲ್ಲದ ತಪ್ಪಿಗೆ' ಬಾಧ್ಯಸ್ಥರಾಗುವುದನ್ನು ಭಾಗ್ಯ, ಎಂ. ಆರ್. ಕಮಲ ಅವರ ಕವನಗಳಲ್ಲಿ ಪ್ರಸ್ತಾಪಿಸುವುದನ್ನು ಕಾಣಬಹುದು. ದುರ್ಗೆ, ಅಮೃತಮತಿ, ಅಹಲ್ಯೆ, ದ್ರೌಪದಿ, ಸೀತೆ - ಈ ಪಾತ್ರಗಳ ಒಳ ಆಯಾಮಗಳ ಶೋಧನೆಯನ್ನು ನಮ್ಮ ಕವಯಿತ್ರಿಯರಾದ ಎಚ್.ಎಲ್. ಪುಷ್ಪ, ಸುಕನ್ಯಾ ಮಾರುತಿ, ಪ್ರತಿಭಾ ನಂದಕುಮಾರ್ ಮುಂತಾದವರ ಕವನಗಳಲ್ಲಿ ಕಾಣಬಹುದು. ಸಂಪ್ರದಾಯಕ್ಕೆ ಸವಾಲೆಸೆವ ಹಲವಾರು ಕವಯತ್ರಿಯರಲ್ಲಿ ತಾವು ತಮ್ಮ ತಾಯಿಯಂತಾಗಬಾರದು ಎನ್ನುವ ಎಚ್ಚರವು ಕಂಡುಬರುತ್ತದೆ. ಸ. ಉಷಾ, ಚ. ಸರ್ವಮಂಗಳಾ, ಮಲ್ಲಿಕಾ ಘಂಟಿ, ವಿಜಯಾ ದಬ್ಬೆ, ಇವರ ಕವನಗಳಲ್ಲಿ ಹೀಗೆ ಭಿನ್ನವಾದ ತನ್ನದೇ ಆದ ದಾರಿಯೊಂದರ, ತನ್ನತನದ ಹುಡುಕಾಟ ಅಭಿವ್ಯಕ್ತಗೊಂಡಿದೆ.

ಕಥೆ, ಕಾದಂಬರಿ, ಕಾವ್ಯದ ಕ್ಷೇತ್ರಗಳಷ್ಟೇ ಅಲ್ಲದೆ ಸಾಹಿತ್ಯ ವಿಮರ್ಶೆ, ವೈಚಾರಿಕ ಸಾಹಿತ್ಯ, ಅನುವಾದ, ಗ್ರಂಥ ಸಂಪಾದನೆ, ವಿಜ್ಞಾನ ಸಾಹಿತ್ಯಗಳ ಕ್ಷೇತ್ರಗಳಲ್ಲೂ ಮಹಿಳೆಯರ ಕೃಷಿ ನಡೆದಿದೆ. ಸಾಹಿತ್ಯ ವಿಮರ್ಶೆಯನ್ನು ಗಂಭೀರ ಕಾಳಜಿಯನ್ನಾಗಿ ಮಾಡಿಕೊಂಡಿರುವ ಡಾ. ವಿಜಯಾ ದಬ್ಬೆ ಮತ್ತು ಡಾ. ಬಿ.ಎನ್. ಸುಮಿತ್ರಾ ಬಾಯಿಯವರು ಕಳೆದ ಎರಡು ದಶಕಗಳಿಂದ ವಿಮರ್ಶಾ ಸಾಹಿತ್ಯ ರಚನೆಯಲ್ಲಿ ತೊಡಗಿದ್ದಾರೆ. ಸ್ತ್ರೀವಾದದ ತಾತ್ವಿಕ ನೆಲೆಯಿಂದ ಪ್ರಾರಂಭವಾಗುವ ಇವರ ವಿಮರ್ಶೆ, ಸ್ತ್ರೀ-ಪುರುಷರ ರಚನೆಗಳಲ್ಲಿನ ಸ್ತ್ರೀ ಪಾತ್ರಗಳ ವಿಶ್ಲೇಷಣೆ, ಗತಿಸಿದ ತಲೆಮಾರುಗಳ ಲೇಖಕಿಯರ ಮರು ಶೋಧನೆಯ ಮೂಲಕ ಸ್ತ್ರೀ ಸಾಹಿತ್ಯದ ಪಾರಂಪರಿಕ ಹಂತಗಳನ್ನು ಚರಿತ್ರೆಯಲ್ಲಿ ದಾಖಲಾಗಿಸುವ ಮಹತ್ವದ ಕೆಲಸಗಳತ್ತ ಮೊದಲು ಕೇಂದ್ರಿತವಾಗಿತ್ತು. ಆದರೆ ಎಂಭತ್ತರ ದಶಕದ ಉತ್ತರಾರ್ಧದಲ್ಲಿ ಅಂತರಶಾಸ್ತ್ರೀಯ ಆಯಾಮಗಳನ್ನು ಸ್ವೀಕರಿಸುವ ಸಾಂಸ್ಕೃತಿಕ ವಿಮರ್ಶೆಯಾಗಿ ಸ್ತ್ರೀವಾದಿ ವಿಮರ್ಶೆಯನ್ನು ಇವರುಗಳು ಬೆಳೆಸುತ್ತಿದ್ದಾರೆ. ವಿಮರ್ಶೆಯಲ್ಲದೆ ವಿಜ್ಞಾನ ಮತ್ತು ವೈದ್ಯಕೀಯ ಸಾಹಿತ್ಯ ರಚನೆಯಲ್ಲಿ ಡಾ. ಅನುಪಮಾ ನಿರಂಜನ, ಡಾ. ಅನ್ನಪೂರ್ಣಮ್ಮ, ಡಾ. ಗಿರಿಜಮ್ಮ, ಡಾ. ಲೀಲಾವತಿ ದೇವದಾಸ್, ನೇಮಿಚಂದ್ರ ಮುಂತಾದವರು ಗಮನಾರ್ಹ ಹೆಸರುಗಳಾಗಿ ಕಂಡುಬರುತ್ತಾರೆ. ಸರಸ್ವತಿ ರಿಸಬುಡ್ ಅವರು ಹಲವಾರು ಇಂಗ್ಲಿಷ್, ಮರಾಠಿ ಗ್ರಂಥಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಸಿ.ವೈ. ಭಾನುಮತಿ ಮತ್ತು ಡಾ. ನಾಗರತ್ನಮ್ಮ, ಇವರು ಗ್ರಂಥಸಂಪಾದನಾ ಕ್ಷೇತ್ರದಲ್ಲಿ ಬಹುಪ್ರಮುಖವಾದ ಹೆಸರುಳ್ಳವರು.

ಹೀಗೆ ಮಹಿಳೆಯರು ಬರವಣಿಗೆಯ ಎಲ್ಲ ಕ್ಷೇತ್ರಗಳಲ್ಲೂ ಪ್ರವೇಶಿಸಿ ಕ್ರಿಯಾಶೀಲರಾಗಿದ್ದಾರೆ. ಆದರೆ ಯಾವುದಾದರೂ ಒಂದು ಹಾದಿಯಲ್ಲಿ ತನ್ನ ಸರ್ವಸಾಮರ್ಥ್ಯದ ಧಾರೆ ಎರೆದು ಪರಿಪಾಕ ಸಾಧಿಸಬಲ್ಲಂಥ ಶ್ರದ್ಧೆ ಬೆಳೆಸಿಕೊಳ್ಳಲು ಸಾಧ್ಯವಾದಲ್ಲಿ ಇನ್ನೂ ಮಹತ್ವದ ಕೃತಿಗಳನ್ನು ನಿರೀಕ್ಷಿಸಬಹುದು.

★ ★ ★ ★

ಸವಾಲು

# ಕುಲ್ತಿಕ್ರಿಯ ಮಹಿಳಾ ಗ್ರಾಮ ಪಂಚಾಯ್ತಿ

ಮೂಲ : ಶ್ರೀ ಅಶೀಮ್ ಮುಖರ್ಜಿ
ಅನು: ಶಚಿ ಆರ್. ಯಳಂದೂರ್

**1993ರಲ್ಲಿ ಪಶ್ಚಿಮ ಬಂಗಾಳದ ಗ್ರಾಮವಾದ ಕುಲ್ತಿಕ್ರಿಯಲ್ಲಿ ಮಹಿಳಾ ಗ್ರಾಮ ಪಂಚಾಯ್ತಿಯೊಂದು ಚುನಾಯಿಸಲ್ಪಟ್ಟಿತು. ಕುಲ್ತಿಕ್ರಿಯೇ ಈ ದಿಕ್ಕಿನಲ್ಲಿ ಮೊದಲ ಹೆಜ್ಜೆ ಇಟ್ಟದ್ದಲ್ಲ. ಆ ಕೀರ್ತಿ ಮಹಾರಾಷ್ಟ್ರದ ಮಾಂಜೇರಾಯ್ ಮತ್ತು ಇನ್ನೂ ಅನೇಕ ಗ್ರಾಮ ಪಂಚಾಯ್ತಿಗಳಿಗೇ ಸಲ್ಲಬೇಕು. ಆದರೆ ಸದಾ ಬರಗಾಲಪೀಡಿತವಾಗಿರುವ, ವರ್ಷದಲ್ಲಿ ಒಂದೇ ಬೆಳೆ ಕಾಣುವ, ಹಾಗೂ ಶೇಕಡಾ 90ರಷ್ಟು ಪರಿಶಿಷ್ಟ ಜಾತಿಗಳು ಮತ್ತು ಬುಡಕಟ್ಟು ಜನರಿಂದ ಕೂಡಿರುವ ಕುಲ್ತಿಕ್ರಿಯಲ್ಲಿ ಸಮಗ್ರವಾಗಿ ಮಹಿಳೆಯರೇ ನಡೆಸುತ್ತಿರುವ ಗ್ರಾಮ ಪಂಚಾಯ್ತಿಯ ಯಶಸ್ಸು ಮತ್ತು ಸೋಲುಗಳನ್ನು ಅಂಕಿಸಂಖ್ಯೆಗಳ ಸಮೇತ ಶ್ರೀ ಆಶೀಮ್ ಮುಖರ್ಜಿಯವರು 'ವಿಕಲ್ಪ್'' ಪತ್ರಿಕೆಗಾಗಿ ವರದಿ ಮಾಡಿದ್ದಾರೆ. ಆ ಲೇಖನದ ಸಂಗ್ರಹಾನುವಾದವನ್ನು 'ಅಚಲ'ದ ಓದುಗರಿಗಾಗಿ ನೀಡುತ್ತಿದ್ದೇವೆ.**

– ಸಂ

ಕುಲ್ತಿಕ್ರಿ ಮಿಡ್ನಾಪುರ್ ಜಿಲ್ಲೆಯ ಜಾಗ್ರಾವ್ ಉಪಶಾಖೆಯಲ್ಲಿ ಇರುವ ಯಾವುದೇ ಪ್ರಾಮುಖ್ಯ ಪಡೆಯದ, ಬುಡಕಟ್ಟು ಜನಾಂಗವೇ ಪ್ರಮುಖವಾಗಿರುವ ಅನೇಕ ಹಳ್ಳಿಗಳಲ್ಲಿ ಒಂದು ಪ್ರಮುಖ ವ್ಯಾಪಾರ ಕೇಂದ್ರವಾದ ಬೆಲ್ದ ಮತ್ತು ಜಾಗ್ರಾವುಗಳ ನಡುವಿನ ಹೆದ್ದಾರಿಯಲ್ಲಿರುವ ಕುಲ್ತಿಕ್ರಿ ಗ್ರಾಮವಾಗಲಿ, ಅದರ ನಿವಾಸಿಗಳಾಗಲಿ ಹೆಮ್ಮೆಪಡುವಂಥಾದ್ದೇನನ್ನೂ ಪಡೆದಿರಲಿಲ್ಲ. ಆದರೆ ಮಹಿಳೆಯರೇ ನಡೆಸುವ ಗ್ರಾಮಪಂಚಾಯ್ತಿಯೊಂದು ಪಶ್ಚಿಮ ಬಂಗಾಲದಲ್ಲಿ ಮೊಟ್ಟಮೊದಲಿಗೆ ಈ ಗ್ರಾಮದಲ್ಲಿ ಆದಕೂಡಲೆ ಪರಿಸ್ಥಿತಿಯೇ ಬದಲಾಯಿಸಿತು. ಪ್ರಜಾಪ್ರಭುತ್ವದಲ್ಲಿ ಪ್ರತಿಪಾದಿಸಲಾಗುವ ಕೆಳಸ್ತರದಲ್ಲಿ ಅಧಿಕಾರ ವಿಕೇಂದ್ರೀಕರಣಕ್ಕೆ ಇದು ಒಂದು ಹೊಸ ಆಯಾಮ ನೀಡುವ ಬೆಳವಣಿಗೆಯಾಯಿತು. ಗ್ರಾಮೀಣ ಮಹಿಳೆಯರಿಗೆ, ಕೊನೆಯ ಪಕ್ಷ ಸೈದ್ಧಾಂತಿಕವಾಗಿಯಾದರೂ, ರಾಜಕೀಯ ಅಧಿಕಾರ ನೀಡುವ ಸಂವಿಧಾನದ 73ನೆಯ ತಿದ್ದುಪಡಿಯ ಉದ್ದೇಶವನ್ನು ಇದು ಬಲಪಡಿಸುತ್ತದೆ. ಸಿಪಿಐ(ಎಮ್) ಪಕ್ಷದ ಪ್ರಾದೇಶಿಕ ನಾಯಕತ್ವವು ಈ ಗ್ರಾಮದ ಹದಿಮೂರು ಮಹಿಳೆಯರನ್ನು ತಮ್ಮ ಪಕ್ಷದ ಅಭ್ಯರ್ಥಿಗಳೆಂದು 1993ರ ಪಂಚಾಯ್ತಿ ಚುನಾವಣೆಗೆ ನಿಲ್ಲಿಸಿತು. ಈ ಆಯ್ಕೆಯಲ್ಲಿ ಪಕ್ಷದ ನಾಯಕರು ಕುಲ್ತಿಕ್ರಿಯ ಕೃಷಿ ಮತ್ತು ಸಾಂಸ್ಕೃತಿಕ ಹಿನ್ನೆಲೆಯನ್ನು ಗಮನದಲ್ಲಿಟ್ಟುಕೊಂಡಿದ್ದರು.

ಕುಲ್ತಿಕ್ರಿ ಮುಖ್ಯವಾಗಿ ಬರಗಾಲಪೀಡಿತ ಪ್ರದೇಶ. ಇಲ್ಲಿ ಕೇವಲ ಒಂದೇ ಬೆಳೆ ವರ್ಷಕ್ಕೆ. ಒಟ್ಟು ಜನಸಂಖ್ಯೆಯ ಅರ್ಧಕ್ಕೂ ಹೆಚ್ಚು ಜನ ಪರಿಶಿಷ್ಟ ಜಾತಿಗಳು, ಬುಡಕಟ್ಟುಗಳಿಗೆ ಸೇರಿದವರು. ಇಲ್ಲಿನ ರೈತರಲ್ಲಿ ಅರ್ಧದಷ್ಟು ಜನರಿಗೆ ನೇಗಿಲಿನ ಶ್ರಮದಾಯಕ ಉಳುಮೆಯೇ ಬದುಕುವ ದಾರಿ. ಪರಿಶಿಷ್ಟ ಜಾತಿಗಳು ಮತ್ತು ಬುಡಕಟ್ಟು ಜನರಲ್ಲಿ ಬಹು ಜನರು ಜಮೀನಿಲ್ಲದವರು. ಹೊಲಗಳಲ್ಲಿ ಕೂಲಿಯಾಳುಗಳಾಗಿ ಬಹು ಕಷ್ಟದಿಂದ ಸಂಸಾರದ ನೊಗವನ್ನು ದೂಡುವವರು. ಪಂಚಾಯ್ತಿ ರಾಜ್ಯದ ಹತ್ತಿರಕ್ಕೆ ಇಂತಹ ಜನರನ್ನು ತರಬೇಕೆಂದರೆ ಅವರು ಪಂಚಾಯಿತಿಯ ಕೆಲಸಕಾರ್ಯಗಳಲ್ಲಿ ನೇರವಾಗಿ ಭಾಗವಹಿಸಬೇಕೆಂಬುದು ಪಕ್ಷದವರ ಆಶಯವಾಗಿತ್ತು. ಈಗ ಆಯ್ಕೆಯಾಗಿರುವ ಹದಿಮೂರು ಜನ ಮಹಿಳೆಯರಲ್ಲಿ ಏಳು ಜನ ಪರಿಶಿಷ್ಟ ಜಾತಿಗಳಿಗೂ ಇಬ್ಬರು ಬುಡಕಟ್ಟುಗಳಿಗೂ ಸೇರಿದವರು. ಈ ಒಂಭತ್ತು ಜನರಿಗೆ ಯಾವುದೇ ಶೈಕ್ಷಣಿಕ ಹಿನ್ನೆಲೆಯಿಲ್ಲದಿದ್ದರೂ ಚುರುಕು ಹಾಗೂ ಸ್ಪಷ್ಟವಾದ ವಿಚಾರವುಳ್ಳವರು. ಕೆಲಸ ಮಾಡುವ ಬಗ್ಗೆ ಸ್ಪಷ್ಟವಾದ ನಿಲುವುಳ್ಳವರು. ಇಬ್ಬರನ್ನು ಬಿಟ್ಟು ಬೇರಾರಿಗೂ ರಾಜಕಾರಣದ ಅರಿವಿರಲಿಲ್ಲ. ಪಂಚಾಯಿತಿಯಲ್ಲಿ ಕೆಲಸ ಮಾಡಿದ ಅನುಭವ ಯಾರಿಗೂ ಇರಲಿಲ್ಲ.

18ನೆಯ ಶತಮಾನದಲ್ಲಿ ಜಮೀನುದಾರರ ಆಳ್ವಿಕೆಯಲ್ಲಿದ್ದ ಕುಲ್ತಿಕ್ರಿ ರೈತರ ಮನೆಗಳ ಲೂಟಿ, ಹೆಂಗಸರ ಮೇಲಿನ ಅತ್ಯಾಚಾರಗಳಂಥ ನೂರಾರು ದೌರ್ಜನ್ಯಗಳು ಚಾರಿತ್ರಿಕ ಅನುಭವವುಳ್ಳದ್ದು. ಈಗಿನ ತಲೆಮಾರಿನವರಿಗೆ ಆ ಹಳೆಯ ಅಂಶಗಳು ಹೆಚ್ಚೇನೂ ಗೊತ್ತಿಲ್ಲ. ಆದರೂ ಅಲ್ಲಿನ ಮಹಿಳೆಯರಿಗೆ ತಮ್ಮ ಅಜ್ಜಿಯಂದಿರಿಗೆ ಆದ ದೌರ್ಜನ್ಯಗಳ ನೆನಪು ಇನ್ನೂ ಪೀಡಿಸುತ್ತಿದ್ದು ಅವರು ತೀವ್ರವಾಗಿ ಬದಲಾವಣೆಗೆ ತುಡಿಯುವವರಾಗಿದ್ದಾರೆ.

ಹಿಂದಿದ್ದ ಗ್ರಾಮ ಪಂಚಾಯ್ತಿಯಲ್ಲೂ ಹದಿಮೂರರ ಪೈಕಿ ಆರುಸ್ಥಾನಗಳನ್ನು ಮಹಿಳೆಯರಿಗೇ ಮೀಸಲಿಡಲಾಗಿತ್ತು. ಆ ಮಹಿಳೆಯರು ಒಟ್ಟು ಇಪ್ಪತ್ತನಾಲ್ಕು ಮೌಜಗಳಲ್ಲಿ ಎಂಟರಲ್ಲಿ ಗಂಡಸರನ್ನು ಹಿಂದೆ ಹಾಕಿ ಮುನ್ನಡೆ ಸಾಧಿಸಿದ್ದರು. ಸಾಕ್ಷರತಾ ಕಾರ್ಯಕ್ರಮದಲ್ಲಿ ಅವರು ತೋರಿದ ಉತ್ತಮ ಸಾಧನೆಯನ್ನೂ ಗಮನಿಸಿ ಕಮ್ಯುನಿಸ್ಟ್ ಪಕ್ಷವು ಮಹಿಳೆಯರದೇ ಆದ ಪಂಚಾಯ್ತಿಯನ್ನು ಸ್ಥಾಪಿಸಬೇಕೆಂದು ನಿರ್ಧರಿಸಿತು. 1983–88ರ ಅವಧಿಯಲ್ಲಿ ಈ ಗ್ರಾಮ ಪಂಚಾಯ್ತಿಯ ಉಪಪ್ರಧಾನರಾಗಿದ್ದ ಅರ್ಜುನಸಿಂಗರ ಪ್ರಕಾರ, ಈ ಹಿಂದುಳಿದ ಪ್ರದೇಶದ ಮಹಿಳೆಯರು ಪುರುಷರಿಗಿಂತ ಹಿಂದುಳಿದವರು. ಅನೇಕ ಜೀವನಾವಶ್ಯಕ ವಸ್ತುಗಳಿಂದ ವಂಚಿತರಾದವರು. ವಿದ್ಯಾಭ್ಯಾಸವಾಗಲಿ, ನ್ಯಾಯವಾಗಲಿ, ಸಮಾನತೆಯಾಗಲಿ ಅವರಿಗಿರಲಿಲ್ಲ. ಅವರನ್ನು ಪರಿಪೂರ್ಣ ಮಾನವರೆಂದೇ ಎಣಿಸುತ್ತಿರಲಿಲ್ಲ. ಆದ್ದರಿಂದ ಅವರಿಗೆ

**ಕುಲ್ತಿಕ್ರಿಯ ಪಂಚಾಯ್ತಿ ಸದಸ್ಯೆಯರು: ಕೆಲವು ವಿವರಗಳು**

ಹದಿಮೂರು ಸದಸ್ಯೆಯರಲ್ಲಿ 9 ಜನರು 28 ವರ್ಷಕ್ಕಿಂತ ಕಡಿಮೆ ವಯಸ್ಸಿನವರು. ಒಬ್ಬಾಕೆ ಮೂವತ್ತರ ಅಂಚಿನಲ್ಲಿದ್ದರೆ, ಇಬ್ಬರು ನಲವತ್ತು ವರ್ಷಕ್ಕೆ ಮೇಲ್ಪಟ್ಟವರು. ಏಳುಜನ ಅವಿವಾಹಿತೆಯರು. ವಿವಾಹಿತರಲ್ಲಿ ಮೂವರು ಪತಿಗಳನ್ನು ಬಿಟ್ಟವರು. ಈ ಸದಸ್ಯೆಯರ ಶೈಕ್ಷಣಿಕ ಅರ್ಹತೆ ಅತ್ಯಲ್ಪ. ಒಬ್ಬಾಕೆ ಮಾತ್ರ ಪಿ.ಯು.ಸಿ. ಮೆಟ್ಟಲು ಹತ್ತಿದ್ದರೆ ಇಬ್ಬರು ಪ್ರೌಢಶಿಕ್ಷಣ ಮುಗಿಸಿದವರು. ಆರು ಜನ 4 ರಿಂದ 10ನೇ ತರಗತಿವರೆಗೆ ಓದಿದ್ದಾರೆ. ಉಳಿದ ನಾಲ್ವರಿಗೆ ಅಕ್ಷರ ಜ್ಞಾನವಿದೆ ಅಷ್ಟೆ.

ಈ ಸದಸ್ಯೆಯರಲ್ಲಿ ಎಂಟುಜನ ಹೊಲಗಳಲ್ಲಿ ದುಡಿಯುತ್ತಾರೆ. ಒಬ್ಬಾಕೆ ದರ್ಜಿ. ಇನ್ನೊಬ್ಬಾಕೆ ಅಡುಗೆ ಕೆಲಸ ಮಾಡುವವರು. ಇತರರಲ್ಲಿ ಒಬ್ಬರು ಶಾಲಾ ಶಿಕ್ಷಕಿ, ಒಬ್ಬಾಕೆ ಗೃಹಿಣಿ, ಇನ್ನೊಬ್ಬರು ವಿದ್ಯಾರ್ಥಿನಿ. ಪಂಚಾಯ್ತಿ ಪ್ರಧಾನರಾದ ರೇವತಿ ದಾಸ್‌ಗೆ ಮಾಸಿಕ ಭತ್ಯೆ 500ರೂ.ಗಳು, ಉಪಪ್ರಧಾನರಾದ ತಪತಿ ಸಿಂಗ್‌ಗೆ ನಾನೂರು ರೂ.ಗಳು. ಶಾಲಾಶಿಕ್ಷಕಿಯಾಗಿರುವ ಶಕ್ತಿ ರಾಣಾಗೆ, ಅಡುಗೆ ಕೆಲಸದ ಸಂಧ್ಯಾ ಪೈರಾಗೆ ತಲಾ 300ರೂ.ಗಳು ಭತ್ಯೆ. ರೇಪೇ ಮುರ್ಮು ಎಂಬಾಕೆ ಮಕ್ಕಳ ಅಭಿವೃದ್ಧಿ ಕೇಂದ್ರದಲ್ಲಿ ಗಳಿಸಿದ್ದು ತಿಂಗಳಿಗೆ 150 ರೂ.ಗಳು. ಪ್ರತಿ ಸದಸ್ಯೆಗೂ ವಾಹನ ಭತ್ಯೆಯಾಗಿ ಸರ್ಕಾರ ನೀಡುವುದು ಕೇವಲ 20ರೂ.ಗಳನ್ನು, ಆದರೆ ಅವರ ನಿಜವಾದ ಖರ್ಚುವೆಚ್ಚ ಅಧಿಕವಾಗಿಯೇ ಇದೆ.

ಒಂದು ಅವಕಾಶವನ್ನು ನೀಡಿದರೆ, ಹಿಂದಿನ ಅನೇಕ ತಪ್ಪುಗಳನ್ನು ಅವರು ಸರಿಪಡಿಸಿ ಒಂದು ಒಳ್ಳೆಯ ಸಮಾಜವನ್ನು ನಿರ್ಮಿಸಬಹುದು ಎನ್ನುವುದು ಈ ಪಂಚಾಯ್ತಿ ಆಯ್ಕೆಗಿದ್ದ ಮುಖ್ಯ ಉದ್ದೇಶ.

ರಾಜ್ಯದಲ್ಲೇ ಪ್ರಥಮ ಪ್ರಯತ್ನವೆನಿಸಿದ್ದರೂ ಕುಲ್ತಿಕ್ರಿಯ ಈ ಪಂಚಾಯ್ತಿಯು ಸಾಕ್ಷರತಾ ಯೋಜನೆಯಲ್ಲಿ ಸಕ್ರಿಯವಾಗಿ ತೊಡಗಿದ್ದು ಪಂಚಾಯ್ತಿಯ ಪ್ರಾಥಮಿಕ, ಪ್ರೌಢ, ಉನ್ನತ ಪ್ರೌಢಶಾಲೆಗಳ ಮಕ್ಕಳಿಗೆ ಉಚಿತ ಪಠ್ಯಪುಸ್ತಕ ಒದಗಿಸುವುದು ಮತ್ತು ಆರ್ಥಿಕ ನೆರವನ್ನು ನೀಡುವುದರ ಮೂಲಕ ಶೈಕ್ಷಣಿಕ ಮಟ್ಟವನ್ನು ಸುಧಾರಿಸಲು ಯತ್ನಿಸಿದೆ. ಅಕ್ಷರಸ್ಥರಾದ ಜನರ ಶಿಕ್ಷಣ ಮುಂದುವರಿಕೆಗಾಗಿ ಕಟ್ಟಡ ನಿರ್ಮಿಸಲು ಈ ಪಂಚಾಯ್ತಿ ಒದಗಿಸಿದ್ದು ಕೇವಲ ಕಟ್ಟಡದ ಸಾಮಗ್ರಿಗಳನ್ನು ಮಾತ್ರ. ಗ್ರಾಮದ ಜನರೇ ಮುಂದಾಗಿ, ತಮ್ಮ ಒಂದು ದಿನದ ಕೂಲಿಯನ್ನು ಬದಿಗೊತ್ತಿ, ತಮ್ಮ ಶ್ರಮಹರಿಸಿ ಅದನ್ನು ನಿರ್ಮಿಸಿದ್ದು ನಿಜಕ್ಕೂ ಮಹತ್ವದ ಸಾಧನೆಯಾಗಿದೆ. ಆರೋಗ್ಯ ಘಟಕಕ್ಕೆ ವಿದ್ಯುತ್ತು ಒದಗಿಸಿದ್ದು, ಹೆರಿಗೆ ವಾರ್ಡ್‌ನ ಸ್ಥಾಪನೆಯ ಉದ್ದೇಶ ಈ ಪಂಚಾಯ್ತಿಗಿದೆ.

ಈ ರೀತಿ ಅನೇಕ ಬಗೆಯಲ್ಲಿ ಪ್ರಗತಿಯತ್ತ ಈ ಪಂಚಾಯ್ತಿ ನಡೆದಿದೆಯಾದರೂ ಇದರ ಸೋಲುಗಳೇನೂ ಕಡಿಮೆಯಿಲ್ಲ. ಇನ್ನೂ ಮಾಟ ಮಂತ್ರಗಳಲ್ಲಿ ವಿಶೇಷ ನಂಬಿಕೆಯಿರುವ ಜನರಿಗೆ ಆಧುನಿಕ ವೈಜ್ಞಾನಿಕ ಆರೋಗ್ಯ ರಕ್ಷಣಾ ವಿಧಾನಗಳನ್ನು ಮನದಟ್ಟು ಮಾಡಿಸಬೇಕಾದ ಹೊಣೆ ದೊಡ್ಡದಾಗಿದೆ. ಸಾಮಾಜಿಕ ಅರಣ್ಯಗಳನ್ನಾಗಿ ಮಾಡಲೆಂದು ನಿಗದಿಯಾಗಿದ್ದ 12 ಜಾಗಗಳನ್ನು ಆ ರೀತಿ ಪರಿವರ್ತಿಸಲು ಆಗಲಿಲ್ಲ. ಮಣ್ಣಿನ ಮೇಲುಪದರದ ನಾಶ ಕುಲ್ತಿಕ್ರಿ ಗ್ರಾಮದ ಜ್ವಲಂತ ಸಮಸ್ಯೆ. ಈ ನಾಶವನ್ನು ತಡೆಯಲು ಅಡ್ಡ ಸೇತುವೆ ಕಟ್ಟುವತ್ತ ಪಂಚಾಯ್ತಿ ಯತ್ನಿಸುತ್ತಿದ್ದರೂ, ಮಣ್ಣುಮಾರುವ ಕಂಟ್ರಾಕ್ಟ್‌ದಾರರು ಈ ಯತ್ನಗಳಿಗೆ ಅಡ್ಡಿ. ಭೂಹಿಡುವಳಿ ಪಟ್ಟಾಗಳನ್ನು ಭೂಹೀನರಿಗೆ ನೀಡಿರುವ ಬಗ್ಗೆ ಲಿಖಿತ ದಾಖಲೆಗಳಿಗೂ, ವಾಸ್ತವಾಂಶಗಳಿಗೂ ಅಂತರವಿದೆ. ಹೊಲಗಳಲ್ಲಿ ಕೂಲಿಯಾಳುಗಳಾಗಿರುವ ಬುಡಕಟ್ಟು ಜನರು ಉಪಕಸುಬಿಗಾಗಿ ಬುಟ್ಟಿ ಹೆಣೆದರೂ, 'ಮಾಮಾಜಿ' ಎಂಬ ಮಾರ್ವಾಡಿ ಈ ಜನರ ದುಡಿಮೆಗೆಲ್ಲ ತನ್ನ ಯಜಮಾನಿಕೆಯನ್ನು ಸ್ಥಾಪಿಸಿಕೊಂಡಿದ್ದು, ನಿಜವಾದ ದುಡಿಮೆಗಾರರಿಗೆ ದೊರೆಯುವ ಪ್ರತಿಫಲಕ್ಕೂ ಅವರ ಶ್ರಮಕ್ಕೂ ಕಂದರವಿದೆ. ಆದರೆ ಸಹಕಾರ ಸಂಘವೊಂದನ್ನು ರಚಿಸಿ ಇವರ ಸ್ಥಿತಿ ಸುಧಾರಿಸಲು ಪಂಚಾಯ್ತಿಗೆ ಸಾಧ್ಯವಾಗುತ್ತಿಲ್ಲ. ಬ್ಯಾಂಕಿನಿಂದ ನೀಡಲಾಗಿರುವ ಸಾಲದಲ್ಲಿ 1993-94ರ ವೇಳೆಗೆ ವಾಪಸಾಗಬೇಕಾಗಿದ್ದದ್ದು 10 ಲಕ್ಷವಾದರೂ ಈವರೆಗೆ ವಾಪಸಾಗಿರುವುದು ಕೇವಲ 2.75 ಲಕ್ಷ. ಕುಟುಂಬ ಯೋಜನಾ ಶಸ್ತ್ರಕ್ರಿಯೆಗೆ ಒಳಗಾಗುವಲ್ಲಿ ಹಿಂದುಗಳು, ಬುಡಕಟ್ಟು ಜನರು, ತಮ್ಮ ಹೆಂಗಸರನ್ನೇ ಮುಂದು ಮಾಡುತ್ತಾರೆ. ಗ್ರಾಮ ಪಂಚಾಯ್ತಿಯು ಕುಟುಂಬಗಳ ವಿವರಗಳ ದಾಖಲೆ ಮತ್ತು ಆಸ್ತಿಪಾಸ್ತಿಯ ದಾಖಲಾತಿ ಇನ್ನೂ ತಯಾರಾಗಿಲ್ಲ. ಪಡಿತರ ಚೀಟಿಯನ್ನು ಹಂಚಬೇಕಾಗಿರುವುದು 10,000 ಜನರಿಗೆ. ಆದರೆ ಹಂಚಲು ಆಗಿರುವುದು ಕೇವಲ 400. ಮೀನುಗಾರರಿಗೆ ಸಿಕ್ಕುವ ಸಾಲ 21 ಜನರಿಗೆ ದಕ್ಕಿದ್ದರೂ ಮೀನುಹಿಡಿವ ಸಾಮಗ್ರಿ ಸಿಕ್ಕಿರುವುದು 8 ಜನಕ್ಕೆ ಮಾತ್ರ. ವಸತಿ ಹೀನರೆಂದು ಗುರುತಿಸಿದ 25 ಜನರಲ್ಲಿ 5 ಜನರಿಗಷ್ಟೇ ಮನೆ ಸಿಕ್ಕಿದೆ. ಹೀಗೆ ಅನೇಕ ಕೊರತೆಗಳು ಹಾಗೂ ಈ ಗ್ರಾಮದ ಪಟ್ಟಭದ್ರ ಹಿತಾಸಕ್ತಿಗಳ ವಿರೋಧಗಳ ನಡುವೆಯೂ ಈ ಪಂಚಾಯ್ತಿ ಕಾರ್ಯನಿರತವಾಗಿದೆ. ಇಂಥ ಪಂಚಾಯ್ತಿಗೆ ವಿಶೇಷ ಗಮನ ಸರ್ಕಾರದಿಂದ ದೊರೆಯಬೇಕು. ಯಾವುದೇ ವಿಳಂಬವಿಲ್ಲದಂತೆ ಎಲ್ಲ ವಿಶೇಷ ಯೋಜನೆಗಳ ಲಾಭ ಸಿಗಬೇಕು ಎಂದು ಪ್ರಾದೇಶಿಕ ಅಭಿವೃದ್ಧಿ ಅಧಿಕಾರಿ ಪೂರ್ಣಚಂದ್ರ ಶೇಟ್ ಅವರು ಹೇಳುವ ಮಾತು ಅರ್ಥಪೂರ್ಣವೇ ಆಗಿದೆ.

# ಮಹಿಳಾ ಗ್ರಾಮ ಪಂಚಾಯ್ತಿ - ಸಾಧನೆಗಳು

**1993-1995**ರವರೆಗೆ ವಿವಿಧ ಆರ್ಥಿಕ ನೆರವುಗಳು ಹೀಗಿವೆ:

1. ಜವಾಹರ್ ರೋಜ್‌ಗಾರ್ ಯೋಜನೆಯಿಂದ: 3,25,068 ರೂ.ಗಳು
2. ಇಂದಿರಾ ಆವಾಸ್ ಯೋಜನೆಯಿಂದ: 90,000 ರೂ.ಗಳು
3. ಉದ್ಯೋಗ ಭರವಸೆ ಯೋಜನೆಯಿಂದ ಮತ್ತು ದಶಲಕ್ಷ ಬಾವಿ ನಿರ್ಮಾಣ ಯೋಜನೆಯಿಂದ: 1,36,000 ರೂ.ಗಳು
4. ಸಂಕೈಲ್ ಪಂಚಾಯ್ತಿ ಸಮಿತಿಯಿಂದ: 2,87,000 ರೂ.ಗಳು

ವ್ಯಯವಾಗಿರುವ ಮೊತ್ತ:

1. ಪಂಚಾಯ್ತಿ ಪ್ರದೇಶದ 13 ಕೆರೆಗಳಿಗೆ ನೀಡಿರುವ ಗುತ್ತಿಗೆ: ರೂ. 5,600/ವರ್ಷಕ್ಕೆ.
2. ಹೊಸದಾಗಿ ನಿರ್ಮಿಸಿದ್ದು 31 ಕೆರೆಗಳು ಮತ್ತು ಸೀಗಡಿ ಸಂಸ್ಕರಣ ಘಟಕದ ನಿರ್ಮಾಣ.
3. 1994 ಆಗಸ್ಟ್‌ವರೆಗೆ ಡಿ.ಆರ್.ಡಿ.ಪಿ. ಸಾಲ 53 ಜನಕ್ಕೆ ನೀಡಲಾಗಿದೆ.
4. 20 ಮಂದಿಯಿರುವ ಬುಟ್ಟಿಹೆಣೆಯುವ ಕೇಂದ್ರವನ್ನು ಫೂಲಬನಿಯಲ್ಲಿ ಸ್ಥಾಪಿಸಿದ್ದು 28 ಎಕರೆ ಖಾಸಗಿ ಹಾಗೂ ಸಾರ್ವಜನಿಕ ಜಮೀನನ್ನು ತೋಟವಾಗಿ ಪರಿವರ್ತಿಸಲಾಗಿದೆ.
5. ಹೊಸದಾಗಿ 16 ಕೊಳವೆ ಬಾವಿಗಳನ್ನು ನಿರ್ಮಿಸಿದ್ದು 24ರ ಗುರಿ ಹೊಂದಲಾಗಿದೆ.

   ಹೊಸ ಸಾಕ್ಷರತೋತ್ತರ ಕೇಂದ್ರಗಳು - 10; ಗುರಿ -16

   ರಸ್ತೆ ರಿಪೇರಿ - 10 ಕಿ.ಮೀ; ಗುರಿ - 18 ಕಿ.ಮೀ.

   ಸಣ್ಣ ಸೇತುವೆ ಹಾಗೂ ಒಳಚರಂಡಿ: 3; ಗುರಿ - 10

   ಪ್ರಾಥಮಿಕ ಶಾಲೆಗಳ ದುರಸ್ತಿ - 4; ಗುರಿ - 8

   ವಸತಿಹೀನರಿಗಾಗಿ ಗೃಹ ನಿರ್ಮಾಣ - 5; ಗುರಿ -10
6. ಪ್ರೌಢಶಿಕ್ಷಣ ಶಾಲೆಗೆ ನೆರವು ನೀಡಿ, ಭೂವಿಜ್ಞಾನ ಮಂಡಲಿಯನ್ನು ರಚಿಸಿ, ವಿದ್ಯಾರ್ಥಿಗಳಿಗೆ ಪರಿಸರ ಪ್ರಜ್ಞೆಯನ್ನು ಮೂಡಿಸಲು ಯತ್ನಿಸಿದೆ.
7. ಪ್ರಾದೇಶಿಕ ಮಹಿಳೆಯರ ಆರ್ಥಿಕ ಸ್ಥಿತಿಯ ಸುಧಾರಣೆಗಾಗಿ ಸಿದ್ಧಉಡುಪು ತಯಾರಿಕೆಯ ತರಬೇತಿ ಮತ್ತು ಉತ್ಪಾದನಾ ಘಟಕಕ್ಕಾಗಿ 48,000 ರೂ.ಗಳನ್ನು ಮೀಸಲಿಡಲಾಗಿದೆ.

## ಕೃತಜ್ಞತೆಗಳು

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರದ ಅಚಲ ದಶಮಾನೋತ್ಸವದ ಈ ವಿಶೇಷ ಸಂಚಿಕೆಯನ್ನು ಹೊರತರುವಲ್ಲಿ ಅತ್ಯಂತ ಪ್ರೀತಿ, ವಿಶ್ವಾಸಗಳಿಂದ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡು, ಆರ್ಥಿಕ ನೆರವಿತ್ತು, ಉಚಿತ ಸಲಹೆ, ಸಹಕಾರಗಳೊಂದಿಗೆ ಶ್ರಮಿಸಿರುವ 'ರಾಮಸುಧಾ ಚಾರಿಟಬಲ್ ಟ್ರಸ್ಟ್'ನ ಡಾ॥ ಎ.ಎಚ್. ರಾಮರಾವ್ ಮತ್ತು ಶ್ರೀಮತಿ ಸುಧಾ ಆರ್. ರಾವ್ ಅವರಿಗೆ 'ಜಾಗೃತಿ'ಯ ಹೃತ್ಪೂರ್ವಕ ವಂದನೆಗಳು.

ಸವಾಲು

## ಬದಲಾಗುತ್ತಿರುವ ಭಾರತೀಯ ಸಮಾಜದಲ್ಲಿ ಮಹಿಳೆ

- ರಂಜಾನ್ ದರ್ಗಾ

ಬಂಡವಾಳಶಾಹಿ ಜಗತ್ತು ಮೊದಲು ಹೆಣ್ಣಿಗೆ ವಿಮೋಚನೆಯ ದಾರಿ ತೋರಿಸುತ್ತದೆ. ನಂತರ ಕೇವಲ ಲೈಂಗಿಕ ವಸ್ತುವಾಗಿ ರೂಪಾಂತರಿಸುತ್ತದೆ. ಬಂಡವಾಳಶಾಹಿ ಜಗತ್ತು ಸುಲಿಗೆ ಮಾಡುವುದು ಕೇವಲ ಸಂಪತ್ತನ್ನಷ್ಟೇ ಅಲ್ಲ. ಅದು ಮಾನವನ ಭಾವನಾ ಪ್ರಪಂಚವನ್ನು ಕೂಡ ಸುಲಿಗೆ ಮಾಡುತ್ತದೆ. ಮನುಷ್ಯರ ಅತ್ಯಂತ ಖಾಸಗಿ ಕ್ಷಣಗಳನ್ನು ಅದು ಹಾಡುಹಗಲೇ ನಡು ಬೀದಿಯಲ್ಲಿ ತಂದು ನಿಲ್ಲಿಸುತ್ತದೆ.

ಇಂದಿನ ಜಾಹೀರಾತು ಯುಗದಲ್ಲಿ ನಮ್ಮ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕು ತೀವ್ರಗತಿಯಲ್ಲಿ ಬದಲಾಗುತ್ತಿದೆ. ಸಮೂಹ ಮಾಧ್ಯಮಗಳಿಗೆ ಜಾಹೀರಾತುಗಳೇ ಜೀವಾಳವಾಗಿವೆ. ಜನಸಮುದಾಯಕ್ಕೆ ದೂರದರ್ಶನದಂಥ ಸಮೂಹ ಮಾಧ್ಯಮಗಳು 'ಸುಖಜೀವನ'ದ ಆಧಾರಗಳಾಗಿವೆ.

ಹೊಸ ಆರ್ಥಿಕ ನೀತಿಯ ಸಹಾಯದೊಂದಿಗೆ ಭಾರತದಲ್ಲಿ ತಮ್ಮ ಹಿರಿಮೆಯನ್ನು ಮೆರೆಯಬಯಸುವ ಮುಕ್ತ ಮಾರುಕಟ್ಟೆಯ ದೊರೆಗಳು, ಬಹುರಾಷ್ಟ್ರೀಯ ಕಂಪೆನಿಗಳು ಮತ್ತು ಸುಲಿಗೆ ವ್ಯವಸ್ಥೆಯ ತಂತ್ರಜ್ಞಾನಿಗಳು ಈ ಜನಕ್ಕೆ ಹೊಸ ಹೊಸ ಅಭಿರುಚಿ ಸೃಷ್ಟಿಸುವಲ್ಲಿ ತಲ್ಲೀನರಾಗಿದ್ದಾರೆ. ಅದಕ್ಕಾಗಿ ಅವರು ಮುಖ್ಯವಾಗಿ ಬಳಸುವುದು ಲೈಂಗಿಕ ಪ್ರಚೋದನೆಗೆ ಪೂರಕವಾಗಿರುವ ಭಂಗಿಗಳಲ್ಲಿ ಪೋಜು ಕೊಡುವ ಹೆಣ್ಣುಗಳನ್ನು. ಅವರ ವಿವಿಧ ಪ್ರಕಾರದ ಜಾಹೀರಾತುಗಳಲ್ಲಿ ಹೆಣ್ಣಿನ ಅರೆನಗ್ನ ದೇಹಗಳು ಅನಿವಾರ್ಯವಾಗಿವೆ. ಹೀಗೆ ಹೆಣ್ಣು ತನಗರಿಯದಂತೆಯೆ ಬೃಹತ್ ಮಾರಾಟ ವ್ಯವಸ್ಥೆಗೆ ಪೂರಕವಾದ ಮಾರಾಟದ ವಸ್ತುವಾಗುತ್ತಿದ್ದಾಳೆ. ಆಧುನಿಕ ವ್ಯಾಪಾರಿ ಜಗತ್ತು ಹೆಣ್ಣಿನ ಅಂಗಾಂಗಗಳನ್ನೆಲ್ಲ ಶೋಧಿಸುತ್ತ ಹೆಣ್ಣಿಗೇ ಗೊತ್ತಿರದಂಥ ಮಾದಕತೆಯ ತಾಣಗಳನ್ನು ಗುರುತಿಸಿ ಅದಕ್ಕೇ ಪ್ರಾಮುಖ್ಯ ನೀಡಿ ಜಗತ್ತಿಗೆ ತೋರಿಸಿಕೊಡುವಲ್ಲಿ ಯಶಸ್ವಿಯಾಗುತ್ತಿದೆ.

ಶೃಂಗಾರ ಸಾಧನಗಳು, ಫ್ಯಾಷನ್ ಬಟ್ಟೆಗಳು, ಗೃಹೋಪಯೋಗಿ ಉಪಕರಣಗಳು. . . . ಅಷ್ಟೇ ಅಲ್ಲದೆ ಬ್ಲೇಡು ಮತ್ತು ಸಿಗರೇಟುಗಳ ಜಾಹೀರಾತುಗಳಲ್ಲಿ ಕೂಡ ಮೋಹಕ ಮೈಮಾಟ ಪ್ರದರ್ಶಿಸುವ ಹೆಣ್ಣೇ ಬೇಕು. ಬುದ್ಧಿಮತ್ತೆಯ 'ನಾಟಕ'ದಿಂದ ಕೂಡಿದ ಸೌಂದರ್ಯ ಸ್ಪರ್ಧೆಗಳು ಹೆಣ್ಣನ್ನು ಭೋಗವಸ್ತುವಾಗಿ ಮಾರ್ಪಡಿಸುವಲ್ಲಿ ಯಶಸ್ವಿಯಾಗುತ್ತ ಸಾಮ್ರಾಜ್ಯಶಾಹಿಗಳಿಗೆ ತೃಪ್ತಿ ನೀಡುತ್ತಿವೆ. ತೃತೀಯ ಜಗತ್ತಿನ ರಾಷ್ಟ್ರಗಳ ಬಾಲೆಯರು ವಿಶ್ವಸುಂದರಿಯರಾಗಿ ಮತ್ತು ಲೋಕ ಸುಂದರಿಯಾಗಿ ಆಯ್ಕೆಯಾಗುತ್ತಿರುವುದರಲ್ಲಿ ಹೊಸ ವಸಾಹತುಶಾಹಿ ನೀತಿ ಎಷ್ಟರ ಮಟ್ಟಿಗೆ ಪೂರಕವಾಗಿದೆ ಎಂಬುದನ್ನು ಅರಿತುಕೊಳ್ಳುವುದು ಅವಶ್ಯವಾಗಿದೆ.

### ಪಾರದರ್ಶಕ ದೃಶ್ಯಮಾಧ್ಯಮಗಳು

ಅಸಹನೀಯವಾದ ಬದುಕಿನ ವಿರುದ್ಧ ಹೋರಾಡಲು ಮಾನವನಿಗೆ ಹೊಸ ಬದುಕಿನ ಕನಸು ಕಾಣುವ ಪ್ರಜ್ಞೆ ಬೇಕು. ನಂತರ ಹೋರಾಟಕ್ಕಾಗಿ ಸಂಘಶಕ್ತಿಯ ಸೃಷ್ಟಿಯಾಗಬೇಕು. ಆದರೆ ಇದೆಲ್ಲ ಭಾರೀ ಶ್ರಮದಾಯಕ ಕೆಲಸ ಎಂದು ಭಾವಿಸುವವರು ಭ್ರಮೆಗಳನ್ನು ಸೃಷ್ಟಿಸಿಕೊಂಡು 'ಸುಖ'ಪಡೆಯಬಯಸುತ್ತಾರೆ. ಎಲೆಕ್ಟ್ರಾನಿಕ್ ಸಮೂಹ ಮಾಧ್ಯಮಗಳು ಭ್ರಮೆಗಳನ್ನು ಸೃಷ್ಟಿಸುವ ಕಾರ್ಖಾನೆಗಳಂತೆ ಕೆಲಸ ಮಾಡುತ್ತಿವೆ. ಈ ಭ್ರಮೆಗಳ ಮರುಭೂಮಿಯಲ್ಲಿ ಸೃಜನಶೀಲತೆ ಓಯಸಿಸ್ ಹಾಗೆ ಗೋಚರಿಸುವುದು. ಟಿ.ವಿ. ಮತ್ತು ಸಿನಿಮಾ ಮಂದಿ ಭ್ರಮೆಗಳನ್ನು ಸೃಷ್ಟಿಸಿ ಸೃಷ್ಟಿಸಿ ದಣಿದಿದ್ದಾರೆ. ಹೀಗಾಗಿ ಎಲ್ಲೆಂದರಲ್ಲಿ ಏಕತಾನತೆ ಕಾಣಿಸುತ್ತಿದೆ. ಹಾಡು, ಕುಣಿತ, ಸಂಭಾಷಣೆ ಮತ್ತು ನಟನೆಯಲ್ಲಿ ಯಾವುದೇ ಹೊಸತನ ಕಾಣದಿದ್ದರೂ ಜನ ಸಹಿಸಿಕೊಳ್ಳುತ್ತಾರೆ. ಈ ಏಕತಾನತೆಗೆ ಸೆಕ್ಸ್ ಮತ್ತು ಕ್ರೈಂನ ಲೇಪವಿರುವುದೇ ಇದಕ್ಕೆ ಮುಖ್ಯ ಕಾರಣವಾಗಿದೆ.

ಹಣ ಮತ್ತು ಅಧಿಕಾರಕ್ಕೆ ಪೂರಕವಾಗಿ ಸೆಕ್ಸ್ ಮತ್ತು ಕ್ರೈಂ ಬರುತ್ತವೆ. ಇವೆಲ್ಲವುಗಳಿಗೆ ಕೇಂದ್ರಬಿಂದುವಾಗಿ ಹೆಣ್ಣು ಕಾಣಿಸಿಕೊಳ್ಳುತ್ತಾಳೆ. ರತಿಕ್ರೀಡೆಗೆ ಪೂರ್ವಭಾವಿಯಾದ ಎಲ್ಲ ಅಂಗಚೇಷ್ಟೆಗಳನ್ನು ಒಳಗೊಂಡ ಸಿನಿಮಾ ಹಾಡುಗಳನ್ನು ಮತ್ತು ಜಾಹೀರಾತುಗಳನ್ನು ಇಂದು ಟಿ.ವಿ. ಮೂಲಕ ಮನೆ ಮನೆಗೆ ತಲುಪಿಸಲಾಗುತ್ತಿದೆ. ನಟಿಯರು ಹೆಚ್ಚು ಹೆಚ್ಚು 'ರಂಗೀಲಾ'ಗಳಾದಷ್ಟು ನಿರ್ಮಾಪಕರು, ನಿರ್ದೇಶಕರು ಹೆಚ್ಚು ಹೆಚ್ಚು ಖ್ಯಾತರಾಗತೊಡಗುತ್ತಾರೆ.

### ಜಾಹೀರಾತಿನ ರಂಗು ರಮಣ

ಹೆಣ್ಣಿನ ಸಹಕಾರದೊಂದಿಗೆ ಜಾಹೀರಾತುಗಳ ಮೂಲಕ ತೋರಿಸುವ ಸೀರೆಗಳು, ಮ್ಯಾಕ್ಸಿಗಳು, ಬ್ರಾಗಳು, ಪ್ಯಾಂಟಿಗಳು,

ಪ್ಯಾಂಟುಗಳು, ಷರ್ಟುಗಳು, ಲಿಪ್‌ಸ್ಟಿಕ್, ಶಾಂಪೂ, ಸೋಪು, ಬ್ಲೇಡುಗಳು, ಆಫ್ಟರ್ ಷೇವ್ ಲೋಷನ್, ವಿವಿಧ ಗೃಹೋಪಯೋಗಿ ಮತ್ತು ಐಷಾರಾಮಿ ವಸ್ತುಗಳು ಇಲ್ಲದೆ ಮಾನವ ಜನ್ಮಕ್ಕೆ ಮುಕ್ತಿ ಇಲ್ಲ ಎಂಬ ಭಾವ ಮೂಡಿದೆ. ಪ್ರತಿಯೊಬ್ಬ ಮನುಷ್ಯನನ್ನು ಗ್ರಾಹಕನನ್ನಾಗಿ ಪರಿವರ್ತಿಸುತ್ತ ತಮ್ಮ ಪ್ರತಿ ವಸ್ತುವಿಗೂ ಬೃಹತ್ ಮಾರುಕಟ್ಟೆ ಸೃಷ್ಟಿಸಿಕೊಳ್ಳುವ ಉದ್ದಿಮೆಪತಿಗಳು ವ್ಯಾಪಾರಿಭಾವದೊಂದಿಗೆ ಹೆಣ್ಣಿನ ಮಹತ್ವ ಅರಿತದ್ದು ಅಚ್ಚರಿ ಹುಟ್ಟಿಸುವಂತಿದೆ.

ಹೆಣ್ಣನ್ನು ಅರೆಬೆತ್ತಲೆಗೊಳಿಸಿದ ಬಟ್ಟೆಯೊಂದರ ಜಾಹೀರಾತಿನ ಕೆಳಗೆ ಹೀಗೆ ಬರೆದಿದೆ: ಬಹುರಾಷ್ಟ್ರೀಯರನ್ನು ಸ್ವಾಗತಿಸಲು ಈ ಬಟ್ಟೆ ಅವಶ್ಯ.

ವಿದೇಶಿ ಕಂಪನಿಗಳ ಮತ್ತು ಭಾರೀ ಉದ್ದಿಮೆಗಳ ವಿಶಿಷ್ಟ ಹುದ್ದೆಯಲ್ಲಿ ಕೆಲಸ ಮಾಡುವ ತರುಣಿಯರು ತಮ್ಮ ಕಂಪನಿ ಜೊತೆ ಭಾರೀ ವ್ಯವಹಾರ ಕುದುರಿಸಲು ಬರುವ ಗಣ್ಯ ವ್ಯಕ್ತಿಗಳ ಜೊತೆ ಇದ್ದು ಅವರನ್ನು 'ಖುಷಿ'ಪಡಿಸುವುದು ನೌಕರಿಯ ಒಂದು ಭಾಗವಾಗುತ್ತಿದೆ. ಬಂಡವಾಳಶಾಹಿ ವ್ಯವಸ್ಥೆ ಹೆಣ್ಣಿಗೆ ಸ್ವಾತಂತ್ರ್ಯ ಕೊಡುವ ರೀತಿ ಮತ್ತು ಕಸಿದುಕೊಳ್ಳುವ ಕ್ರಮಗಳನ್ನು ಎಚ್ಚರಿಕೆಯಿಂದ ಗಮನಿಸುವುದು ಅವಶ್ಯವಾಗಿದೆ.

ಭಾರತೀಯ ಸಮಾಜ ಹಸಿವಿನಿಂದ ಮತ್ತು ಕಾಮದ ಹಸಿವಿನಿಂದ ಬಳಲುತ್ತಿದೆ. ಹುಡುಗ ಹುಡುಗಿಯರು ಇಂದಿಗೂ ಮೈ ಮರೆತು ತಿರುಗುವ ಪರಿಸ್ಥಿತಿ ಇಲ್ಲ. ಎಲ್ಲ 'ಸಾತ್ವಿಕರು' ಅವರತ್ತ ಕಣ್ಣು ಪಿಳುಕಿಸುವವರೇ ಆಗಿದ್ದಾರೆ. ಆದರೆ ಟಿ.ವಿ. ಮತ್ತು ಸಿನಿಮಾಗಳಲ್ಲಿನ ಪಾತ್ರಗಳು ಚೆನ್ನಾಗಿ ಉಂಡುಟ್ಟು ಹಾಯಾಗಿ ಹಾಡುತ್ತ ಮರ ಸುತ್ತಲು ಸಾಧ್ಯ. ಈ ದೃಶ್ಯಗಳನ್ನು ನೋಡುವವರ ಮನದಾಳದಲ್ಲಿ ಹುದುಗಿಕೊಂಡಿರುವ ಭಾವನೆಗಳು ಅವರು ಕುಳಿತಲ್ಲೇ ಕ್ರಿಯಾಶೀಲವಾಗಿ ಕೆಥಾರ್ಸಿಸ್ ಅನುಭವ ನೀಡುತ್ತವೆ. ವಾಸ್ತವದ ಜಾಗವನ್ನು ಭ್ರಮೆಗಳು ತುಂಬಿಕೊಳ್ಳುತ್ತವೆ.

ಹೆಣ್ಣಿನ ಸ್ವಾತಂತ್ರ್ಯದ ಕನಸು ಮತ್ತು ಗಂಡಿನ ಭೋಗದ ಕನಸುಗಳು ಸಮೂಹ ಮಾಧ್ಯಮದಲ್ಲಿ ಒಂದುಗೂಡಿದಂಥ ಭ್ರಮೆಗಳನ್ನು ಸೃಷ್ಟಿಸಲಾಗುತ್ತಿದೆ. ಈ ಭ್ರಮೆ ಜನಸಮುದಾಯದ ಎಲ್ಲ ರೀತಿಯ ಹೋರಾಟದ ಕನಸುಗಳನ್ನು ಕಳೆದುಕೊಳ್ಳುವಂತೆ ಮಾಡಿದೆ. ಇಂದಿನ ಭ್ರಮಾತ್ಮಕ ವಾತಾವರಣದಲ್ಲಿ ಮನುಷ್ಯರು ಮನೆಯಲ್ಲೇ ಪರಕೀಯರಾಗುತ್ತಿದ್ದಾರೆ. ಟಿ.ವಿ. ಧಾರಾವಾಹಿಗಳ ಪಾತ್ರಗಳ ಜೊತೆ ಸಂಬಂಧ ಬೆಳೆಸಿಕೊಳ್ಳುತ್ತಿದ್ದಾರೆ.

**ವಾಸ್ತವದ ಕರಿಛಾಯೆ**

ಈ ವಾಸ್ತವದ ಅರಿವಿನೊಂದಿಗೆ ಹೆಣ್ಣು ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಬೆಳೆದು ಬಂದ ರೀತಿಯನ್ನು ಗಮನಿಸುವುದು ಅವಶ್ಯವಾಗಿದೆ.

ನನಗೆ ನನ್ನ ಬಾಲ್ಯದ ದಿನಗಳು ನೆನಪಾಗುತ್ತಿವೆ. ನಮ್ಮ ಸಮಾಜ ಹೆಣ್ಣಿಗೆ ಕೊಟ್ಟಿದ್ದ ಅತಿ ದೊಡ್ಡ ಸ್ವಾತಂತ್ರ್ಯವೆಂದರೆ ತವರೂರಿನಲ್ಲಿ ನಾಗರಪಂಚಮಿಯ ದಿನ ಗೆಳತಿಯರ ಜೊತೆ ಜೋಕಾಲಿ ಆಡುವುದು.

ಹೆಣ್ಣಿನ ಸ್ವಾತಂತ್ರ್ಯ ಮತ್ತು ಸೂಳೆಗಾರಿಕೆಯನ್ನು ಒಂದೇ ತೆರನಾಗಿ ಕಾಣುವ ಸಂದರ್ಭ ಕೇವಲ ನಾಲ್ಕು ದಶಕಗಳ ಹಿಂದೆ ಇತ್ತು. ಬಹುತೇಕ ನಾಟಕಗಳಲ್ಲಿ ಸ್ತ್ರೀ ಪಾತ್ರಗಳನ್ನು ಪುರುಷರೇ ಮಾಡುತ್ತಿದ್ದರು. ನಟಿಯೊಬ್ಬಳು ಕಾಣಿಸಿಕೊಂಡರೆ ಭೋಗದ ವಸ್ತುವೊಂದರ ಸೃಷ್ಟಿಯಾಯಿತೆಂದೇ ಧನಮದವುಳ್ಳ ವಿಷಯಲಂಪಟರ ಅನಿಸಿಕೆಯಾಗಿತ್ತು. ಹೀಗೆ ಮಹಿಳೆಯ ವ್ಯಕ್ತಿತ್ವ ವಿಕಸನಕ್ಕೆ ಸಾವಿರ ಅಡೆತಡೆಗಳಿದ್ದವು. ವಿವಿಧ ರೀತಿಯಲ್ಲಿ ಇಂದಿಗೂ ಅಡೆತಡೆಗಳು ಮುಂದುವರಿದಿವೆ.

ಅವಳಲ್ಲಿ ನಿಜವಾದ ಸ್ವಾತಂತ್ರ್ಯದ ಮೊಳಕೆಯೊಡೆದದ್ದು ಅಕ್ಷರ ಕಲಿಯಲು ಪ್ರಾರಂಭಿಸಿದಾಗ. ಒರಿಸ್ಸಾದ ಗ್ರಾಮವೊಂದರಲ್ಲಿ ಬಾಲಕಿಯೊಬ್ಬಳು ಅಕ್ಷರ ಕಲಿಯಲು ಪ್ರಾರಂಭಿಸಿದ ಸಂದರ್ಭದಲ್ಲಿ ಅಲ್ಲಿ ಪ್ಲೇಗು ಬಂದಿತು. ಆ ಬಾಲಕಿ ಅಕ್ಷರ ಕಲಿಯಲು ಪ್ರಾರಂಭಿಸಿದ್ದೇ ಪ್ಲೇಗು ಬರಲು ಕಾರಣ ಎಂದು ಜನ ಭಾವಿಸಿದರು. ಈ ಘಟನೆಯನ್ನು ಒರಿಸ್ಸಾ ಸಾಹಿತ್ಯದ ಸಣ್ಣ ಕತೆಗಳ ಪಿತಾಮಹ ಫಕೀರ್ ಮೋಹನ್ ಸೇನಾಪತಿ ಅವರು ತಮ್ಮ ವಿಶ್ವವಿಖ್ಯಾತ 'ರೇವತಿ' ಕಥೆಯಲ್ಲಿ ಹೃದಯಸ್ಪರ್ಶಿಯಾಗಿ ಚಿತ್ರಿಸಿದ್ದಾರೆ.

ಹೆಣ್ಣು ಸೀರೆಯೊಳಗೆ ಲಂಗ ಮತ್ತು ರವಿಕೆಯೊಳಗೆ ಬ್ರಾ ತೊಡುವುದಕ್ಕಾಗಿ ಕೂಡ ಭಾರಿ ಮೌನ ಹೋರಾಟ ಮಾಡಿದ್ದಾಳೆ. (ಅಮೆರಿಕದಲ್ಲಿ ವಾಸಿಸುವ ಅಂಬಟ್ಟಿ ಕುಟುಂಬ ಮೊನ್ನೆ ತಾನೆ 'ಚಡ್ಡಿ ಧರಿಸುವವರು ಸೂಳೆಯರು' ಎಂದು ತಮ್ಮ ಮುಗ್ಧ ಸೊಸೆ ಚಡ್ಡಿ ಧರಿಸುವುದನ್ನು ವಿರೋಧಿಸಿದ್ದು ಇನ್ನೂ ಹಸಿರಾಗಿದೆ.)

ಅರವತ್ತರ ದಶಕದಲ್ಲಿ ಭಾರತದಲ್ಲಿ ಒಂದು ಕ್ರಾಂತಿಯೇ ನಡೆದುಹೋಯಿತು. ಅದೇ ಸ್ಕರ್ಟ್ ಕ್ರಾಂತಿ. ಹುಡುಗಿಯರು ಸ್ಕರ್ಟ್ ಅನ್ನು ಎಷ್ಟು ಪ್ರೀತಿಸಿದರೆಂದರೆ ಅದಕ್ಕಾಗಿ ಸಾಯಲೂ ಸಿದ್ಧರಿದ್ದರು. ಎಸ್ಸೆಸ್ಸೆಲ್ಸಿಯಲ್ಲಿ ನನ್ನ ಜೊತೆ ಓದುತ್ತಿದ್ದ ಹುಡುಗಿಯೊಬ್ಬಳು ಎರಡು ದಿನ ಊಟ ಮಾಡದೆ ಹಟ ಹಿಡಿದು ಸ್ಕರ್ಟ್ ಕೊಂಡ ಘಟನೆ ಇಂದಿಗೂ ನೆನಪಿದೆ.

ಕಾಲೇಜು ಹುಡುಗಿಯರು ಸ್ಕರ್ಟ್ ಧರಿಸಿ ಕ್ಲಾಸಿಗೆ ಬರುವುದು ದೊಡ್ಡ ಸಾಹಸವೇ ಆಗಿತ್ತು. 1971ರಲ್ಲಿ ವಿಜಾಪುರದ ಕಾಲೇಜೊಂದರಲ್ಲಿ ಇಂಗ್ಲಿಷ್ ವಿಭಾಗದ ವಿದ್ಯಾರ್ಥಿನಿಯಾಗಿದ್ದ ಗಂಗಾ ಸ್ಕರ್ಟ್ ಧರಿಸಿ ಕ್ಲಾಸಿಗೆ ಬಂದಾಗ ಇಂಗ್ಲಿಷ್ ಪ್ರಾಧ್ಯಾಪಕರು ವಿರೋಧಿಸಿದರು. ವಿರೋಧವನ್ನು ಲೆಕ್ಕಿಸದೆ ಸ್ಕರ್ಟ್ ಧರಿಸಿ ಕಾಲೇಜಿಗೆ ಬರುವುದರ ಮೂಲಕ ಆಕೆ ಇತಿಹಾಸ ಸೃಷ್ಟಿಸಿದ್ದಳು.

ಈ ರೀತಿ ಕೊಳೆತು ನಾರುವ ಸಮಾಜದಲ್ಲಿ ನಾರಿಯರು ಒಂದೊಂದು ಅಂಗುಲ ಮೇಲೆ ಬರುವುದಕ್ಕಾಗಿ ಭಾರಿ ಮೌನ ಪ್ರತಿರೋಧ ವ್ಯಕ್ತಪಡಿಸಿದ್ದಾರೆ. ಇತ್ತೀಚಿನ ದಿನಗಳಲ್ಲಿ ಸಂಘಟನಾತ್ಮಕವಾಗಿ ಬೆಳೆಯುವುದರ ಮೂಲಕ ಪ್ರಶ್ನಿಸುವ ಶಕ್ತಿ ಪಡೆದಿದ್ದಾರೆ.

ಹೊಡೆಯುವುದು, ಹೀಯಾಳಿಸುವುದು ಮತ್ತು ಶಿಕ್ಷೆ ವಿಧಿಸುವುದು ಗಂಡಸರ ಹಕ್ಕು ಎಂಬ ಭಾವನೆ ದಟ್ಟವಾಗಿದ್ದ ಸಂದರ್ಭದಲ್ಲಿ ನಡೆದ ಒಂದು ಘಟನೆಯನ್ನು ಇಲ್ಲಿ ದಾಖಲಿಸುವುದು ಅವಶ್ಯವಾಗಿದೆ. ಆಗ ನಾನಿನ್ನೂ 4 ವರ್ಷದ ಬಾಲಕ. ನನ್ನ ತಾಯಿಯ ತವರೂರಾದ ವಿಜಾಪುರ ಜಿಲ್ಲೆಯ ಅಲಿಯಾಬಾದ್‌ನಲ್ಲಿ ಅಜ್ಜಿಯ ಜೊತೆ ಇದ್ದೆ. ಎದುರಿನ ಮನೆಯಲ್ಲಿ ಹೊಸದಾಗಿ ಮದುವೆಯಾದ ದಂಪತಿ ಇದ್ದರು . . . .

ಹಳ್ಳಿಗಾಡಿನಲ್ಲಿ ಗಂಡಸು ಬಯಸಿದಾಗ ಬಯಲುಕಡೆ (ಮಲವಿಸರ್ಜನೆ)ಗೆ ಹೋಗಬಹುದು. ಆದರೆ ಮಹಿಳೆಯರು ಹಾಗೆ ಬಯಲಲ್ಲಿ ಬಯಲುಕಡೆಗೆ ಹೋಗಲಿಕ್ಕಾಗದು. ಅವರು ನಸುಕಿನಲ್ಲಿ ಮಲವಿಸರ್ಜನೆಗೆ ಹೋಗಬೇಕು. ಆಕಸ್ಮಿಕವಾಗಿ ಏಳುವುದು ತಡವಾದರೆ ರಾತ್ರಿಯಾಗುವವರೆಗೆ ಮಲ ಹಿಡಿದುಕೊಂಡಿರಬೇಕು!

ಎದುರು ಮನೆಯ ಯುವತಿಗೆ ಮಧ್ಯಾಹ್ನದ ವೇಳೆ ಮಲವಿಸರ್ಜನೆಯ ಬಯಕೆ ತೀವ್ರವಾದಾಗ ತಾಳಿಕೊಳ್ಳಲಾಗದೆ ಹಿತ್ತಲಕ್ಕೆ ಹೋದಳು. ಅದೇ ವೇಳೆಗೆ ಮನೆಗೆ ಬಂದ ಗಂಡ ಉಗ್ರಾವತಾರ ತಾಳಿದ. ದನ ಬಡಿದ ಹಾಗೆ ಬಡಿದ. ಮಲವಿಸರ್ಜನೆ ಮಾಡಿದ ತಪ್ಪಿಗಾಗಿ ಅಡಿಕೆ ಗಾತ್ರದಷ್ಟು ಮಲ ತಿನ್ನಲು ಆಜ್ಞಾಪಿಸಿದ. ಆ ಅಸಹಾಯಕ ಯುವತಿ ಮಲ ತಿಂದೇಬಿಟ್ಟಳು!

ಈ ಸುದ್ದಿ ಹಳ್ಳಿಯ ತುಂಬ ಹಬ್ಬಿತು. ಯಾವುದೇ ಮದುವೆ ಮತ್ತು ಧಾರ್ಮಿಕ ಮುಂತಾದ ಕಾರ್ಯಕ್ರಮಗಳ ಸಹಭೋಜನಕ್ಕೆ ಆತನನ್ನು ಕರೆಯಬಾರದೆಂದು ಸಮಾಜದ ಹಿರಿಯರು ಆದೇಶ ಹೊರಡಿಸಿದರು. ಹಂದಿ ಜೊತೆ ಬಾಳುವೆ ಮಾಡುವವನ ಕೂಡ ಅದು ಹೇಗೆ ಊಟ ಮಾಡುವುದು ಎಂಬುದು ಅವರ ವಾದವಾಗಿತ್ತು. ಕೊನೆಗೆ ತನ್ನ ಸಮಾಜ ಸೇರುವುದಕ್ಕಾಗಿ ಆತ ಹೆಂಡತಿಯನ್ನು ಬಿಟ್ಟ. ಇಂಥ ಅರಣ್ಯ ನ್ಯಾಯಕ್ಕೆ ಮಾನಿನಿಯರು ಒಂದಿಲ್ಲೊಂದು ರೀತಿಯಲ್ಲಿ ಬಲಿಯಾಗುತ್ತಲೇ ಬಂದಿದ್ದಾರೆ.

**ಪಾಂಚಾಲಿ ಸಂಸ್ಕೃತಿ**

ನಮ್ಮ ಕಾವ್ಯದ ಅಷ್ಟಾದಶ ವರ್ಣನೆಗಳಲ್ಲಿ ಸೂಳೆಗೇರಿಯ ವರ್ಣನೆಯೂ ಒಂದಾಗಿದೆ. ಎಲ್ಲ ವೀರರೂ ದೇವರುಗಳೂ ಸೂಳೆಗೇರಿಗೆ ಹೋಗಲೇಬೇಕು. ಯುದ್ಧದಲ್ಲಿ ಸತ್ತ ವೀರರಿಗೆ ಸ್ವರ್ಗ ಗ್ಯಾರಂಟಿ. ಅಲ್ಲಿ ಮೊದಲಿಗೆ ಸಿಗುವವರೇ ಸುಂದರಾಂಗನೆಯರು. ತಾತ್ಕಾಲಿಕವಾಗಿ ಯುದ್ಧ ಮುಂತಾದ ಸಂದರ್ಭಗಳಲ್ಲಿ ಅವರಿಗೆ ಸೂಳೆಯರನ್ನು ಪೂರೈಸಲಾಗುತ್ತಿತ್ತು. ಕನ್ನಡ ಸಂಸ್ಕೃತಿಯ ಭಾಗವಾಗಿರುವ ವಿಜಯನಗರದಲ್ಲಿ – ಪಂಪಾಕ್ಷೇತ್ರದಲ್ಲಿ – ಸೂಳೆಬಜಾರ್ ಕೂಡ ಇದ್ದ ದಾಖಲೆಗಳಿವೆ. ಆ ಪ್ರದೇಶ ಇನ್ನೂ ಹಂಪೆಯಲ್ಲಿದೆ.

ರಾಜರು ಮತ್ತು ಶ್ರೀಮಂತರು ಮಗಳನ್ನು ಮದುವೆ ಮಾಡಿ ಗಂಡನ ಮನೆಗೆ ಕಳಿಸುವಾಗ ಬಳುವಳಿಯಾಗಿ ಗಣಿಕೆಯರನ್ನು ಕೂಡ ಕಳಿಸುತ್ತಿದ್ದರು. ಅಳಿಯದೇವರು ಗಣಿಕೆಯರ ಜೊತೆ ಸುಖಿಸುವ ಹಕ್ಕನ್ನು ಹೊಂದಿದ್ದನು.

ನಮ್ಮ ದೇಶದಲ್ಲಿನ ಪಾಂಚಾಲಿ ಸಂಸ್ಕೃತಿ ಗಂಡನ ಮನೆಯ ಆಸ್ತಿಯನ್ನು ಇಬ್ಭಾಗವಾಗದಂತೆ ನೋಡಿಕೊಳ್ಳುವ ಸಂಸ್ಕೃತಿಯಾಗಿತ್ತು.

ಅನೇಕ ಬುಡಕಟ್ಟುಗಳಲ್ಲಿ ಅಣ್ಣತಮ್ಮಂದಿರರಿಗೆಲ್ಲ ಒಬ್ಬಳೇ ಹೆಂಡತಿ ಇರುವ ಸಂಪ್ರದಾಯ ಇನ್ನೂ ಪ್ರಚಲಿತದಲ್ಲಿದೆ. ಉತ್ತರ ಕನ್ನಡ ಜಿಲ್ಲೆಯ ಹಾಲಕ್ಕಿ ಒಕ್ಕಲಿಗರಲ್ಲಿ ಯುವಕರು ಮದುವೆಯಾಗುವವರೆಗೆ ಅಣ್ಣನ ಹೆಂಡತಿಯ ಜೊತೆ ಲೈಂಗಿಕ ಸಂಬಂಧ ಬೆಳೆಸುವ ಸಂಪ್ರದಾಯ ಇತ್ತೀಚಿನ ದಶಕಗಳವರೆಗೆ ಇತ್ತು. ಇಂಥ ಅವಸ್ಥೆಗೆ ಹೇಸಿಕೊಂಡ ಹೆಣ್ಣೊಬ್ಬಳ ಭಾವನೆಗಳು ಹಾಲಕ್ಕಿಗಳ ಜಾನಪದ ಕಾವ್ಯದಲ್ಲಿ ಸುಂದರವಾಗಿ ಮೂಡಿಬಂದಿದೆ.

ಮೈದುನ ಶಬ್ದ ಸೃಷ್ಟಿಯಾದುದೇ ಮೈಥುನದಿಂದ. ನಂತರ ಸಮಾಜ ಬೆಳವಣಿಗೆ ಹೊಂದಿದಾಗ ಅತ್ತಿಗೆ ವಹ್ನಿ (ಬೆಂಕಿ)ಯಾದಳು. ಹೀಗೆ ಹೆಣ್ಣನ್ನು ಒಂದಿಲ್ಲೊಂದು ರೀತಿಯಲ್ಲಿ ಭೋಗದ ವಸ್ತುವಾಗಿ ಪರಿಗಣಿಸುತ್ತಬರಲಾಗಿದೆ. ಮಾತೃಪ್ರಧಾನ ಕುಟುಂಬದಲ್ಲಿ ಅವಳಿಗಿದ್ದ ಒಂದಿಷ್ಟು ಮಹತ್ವ ಪಿತೃಪ್ರಧಾನ ಕುಟುಂಬ ಸಂಸ್ಕೃತಿಯ ದಾಳಿಯಿಂದಾಗಿ ಹಾಳಾಗಿಹೋಯಿತು.

ಮಹಿಳೆಗೆ ಆರ್ಥಿಕ ಸ್ವಾತಂತ್ರ್ಯ ಲಭಿಸುವವರೆಗೆ ವಿಮೋಚನೆ ಸಾಧ್ಯವಿಲ್ಲ ಎಂಬ ಮಾತು ಸತ್ಯವಾಗಿದ್ದರೂ ಆಕೆ ಆರ್ಥಿಕ ವ್ಯವಸ್ಥೆಯ ಪಂಜರದಲ್ಲೇ ಹಾರಾಡುವಂಥ ವಾತಾವರಣ ಸೃಷ್ಟಿಯಾಗುತ್ತದೆ. ಎಲ್ಲ ರೀತಿಯ ಸ್ವಾತಂತ್ರ್ಯಗಳು ತನ್ನ ವ್ಯಕ್ತಿತ್ವವನ್ನು ಉಳಿಸಿ, ಬೆಳೆಸುವುದಕ್ಕಾಗಿ ಎಂಬುದನ್ನು ಮಹಿಳೆ ಅರಿತುಕೊಳ್ಳುವುದು ಅವಶ್ಯವಾಗಿದೆ.

ಪ್ರವಾಸೋದ್ಯಮ ಮತ್ತು ಮೈ ಮಾರಾಟಗಳು ಬಹಳ ಸಂದರ್ಭಗಳಲ್ಲಿ ಜೊತೆ ಜೊತೆಯಾಗಿ ಸಾಗುತ್ತವೆ. ಯಾವುದೇ ದೇಶ ಇದಕ್ಕೆ ಹೊರತಾಗಿಲ್ಲ. 14 ವರ್ಷಗಳ ಹಿಂದೆ ಒಂದು ರಾತ್ರಿ ಲೆನಿನ್‌ಗ್ರಾಡ್‌ನಲ್ಲಿ ಕಾಲೇಜು ಹುಡುಗಿಯರಂತೆ ಕಾಣುತ್ತಿದ್ದ ಮೂವರು ಕರೆವೆಣ್ಣುಗಳನ್ನು ಕಂಡು ಖಿನ್ನಮನಸ್ಕನಾಗಿದ್ದೆ. ತ್ಯಾಗ ಬಲಿದಾನಗಳಿಂದ ಸೃಷ್ಟಿಯಾಗಿದ್ದ ಲೆನಿನ್ನರ ನಾಡಿನಲ್ಲಿ ಮೈಮಾರಾಟದ ಸಂಗತಿ ನನ್ನನ್ನು ದಂಗುಬಡಿಸಿತ್ತು.

ಅಂದಿನ ಸೋವಿಯತ್ ದೇಶದ ಇನ್‌ಟೂರಿಸ್ಟ್ ಪ್ರವಾಸೋದ್ಯಮ ಇಲಾಖೆ ಪ್ರವಾಸಿಗರಿಗೆ ಅನುಕೂಲ ಕಲ್ಪಿಸಿತ್ತು. ಐರೋಪ್ಯ ದೇಶಗಳ ಪ್ರವಾಸಿಗರು ಮಾಸ್ಕೊದಲ್ಲಿ ಇಳಿದು ಸುತ್ತಾಡಿ ಮುಂದೆ ಪ್ರಯಾಣ ಬೆಳೆಸುವುದಕ್ಕೆ ಅನುಕೂಲತೆಗಳಿದ್ದವು. ಎಲ್ಲ ರೀತಿಯಿಂದಲೂ ಸ್ವಯಂ ಪರಿಪೂರ್ಣವಾದ ಸೋವಿಯತ್ ಸಮಾಜದ ಯುವ ಜನಾಂಗಕ್ಕೆ ವಿದೇಶಿಗರ ಜೀನ್ಸ್ ಪ್ಯಾಂಟುಗಳು, ಗಾಗಲ್‌ಗಳು, ಕ್ಯಾಮರಾಗಳು, ಇನ್ನಿತರ ಮೋಜಿನ ವಸ್ತುಗಳು ಆಕರ್ಷಕವಾಗಿ ಕಂಡವು. ಆ ವಸ್ತುಗಳನ್ನು ರೂಬಲ್ ಕೊಟ್ಟು ಕೊಳ್ಳಲಿಕ್ಕಾಗುತ್ತಿರಲಿಲ್ಲ. ಮಾಸ್ಕೊ ಮುಂತಾದ ನಗರಗಳಲ್ಲಿದ್ದ ಡಾಲರ್ ಶಾಪ್‌ಗಳಲ್ಲಿ ಡಾಲರ್ ಕೊಟ್ಟರೆ ಸಿಗುತ್ತಿದ್ದವು. ಕೆಲ ಯುವತಿಯರು ವಸ್ತುಗಳ ಮೋಹಕ್ಕೆ ಒಳಗಾಗಿ ಅವುಗಳನ್ನು ಪಡೆಯಲೆಂದು ಡಾಲರ್ ಸಂಪಾದಿಸತೊಡಗಿದರು. ಡಾಲರ್ ಸಂಪಾದಿಸಲು ಅವರ ಮುಂದೆ ಒಂದೇ ಮಾರ್ಗವಿತ್ತು - ಡಾಲರ್ ಕೊಡಲು ಸಿದ್ಧರಿರುವ ವಿದೇಶಿಯರಿಗೆ ಲೈಂಗಿಕ ಸುಖ ನೀಡುವುದು.

ಸೋವಿಯತ್ ದೇಶದ ಪತನದ ನಂತರ ಅನೇಕ ರಷ್ಯನ್ ಬಾಲೆಯರು ಊಟ ಬಟ್ಟೆಗಳಿಗಾಗಿ ಬೆಲೆವೆಣ್ಣುಗಳಾದುದು ಇತಿಹಾಸದ ವಿಪರ್ಯಾಸವಾಗಿದೆ.

**ಸ್ವಾತಂತ್ರ್ಯದ ಹೊಸ ಅರಿವು, ಹೊಸ ಕನಸು**

ಇಂದು ಆಯ್ಕೆಯ ಸ್ವಾತಂತ್ರ್ಯವೇ ಹೆಣ್ಣಿಗೆ ಬಹು ಮುಖ್ಯ ಸ್ವಾತಂತ್ರ್ಯವಾಗಿದೆ. ಲೈಂಗಿಕ ಸ್ವಾತಂತ್ರ್ಯ ಸ್ವೇಚ್ಛಾಚಾರ ಅಲ್ಲ ಎಂಬುದು ಗೊಡ್ಡು ಸಂಪ್ರದಾಯದ ಜನ ಅರಿತುಕೊಳ್ಳಬೇಕಿದೆ. ಕಾಯಾ ವಾಚಾ ಮನಸಾ ಸಂಬಂಧ ಹೊಂದಿದಾತನ ಜೊತೆ ಬದುಕುವ ಸ್ವಾತಂತ್ರ್ಯವನ್ನು ಒಂದು ಹೆಣ್ಣು ಬಯಸಿದಾಗ ಐಹಿಕ ಆಸೆಗಳು ಗೌಣವಾಗುತ್ತವೆ ಎಂಬುದು ಬಹು ಮುಖ್ಯವಾದ ವಿಚಾರವಾಗಿದೆ. ಆರ್ಥಿಕ ಸ್ವಾತಂತ್ರ್ಯ ಎಂಬುದು ರಕ್ಷಣಾತ್ಮಕವಾದ ಅಂಶವೆ ಹೊರತು ಹೆಣ್ಣಿನ ಕೊನೆಯ ಆಸೆಯಲ್ಲ. ಆಕೆಗೆ ತನ್ನ ಇಚ್ಛಾನುಸಾರ ಜವಾಬ್ದಾರಿಯುತವಾಗಿ ಬದುಕುವುದರ ಮೂಲಕ ಸ್ವಾತಂತ್ರ್ಯ ಅನುಭವಿಸಬೇಕಾಗಿದೆ.

ಆರ್ಥಿಕ ಸ್ವಾತಂತ್ರ್ಯ ಐಹಿಕ ಬದುಕಿನ ಬಹು ಮುಖ್ಯವಾದ ಅಂಶವಾಗಿರುವುದರಿಂದ ಹೆಣ್ಣಿಗೆ ಆಸ್ತಿಯಲ್ಲಿ ಪಾಲು ನೀಡುವುದರ ಬಗ್ಗೆ ಮತ್ತು ಆಕೆ ಆರ್ಥಿಕ ಸಂಕಟಕ್ಕೀಡಾಗದಂತೆ ನೋಡಿಕೊಳ್ಳಲು ಪೈಗಂಬರ್ ಪ್ರಯತ್ನಿಸಿದರು. ಬಸವಣ್ಣನವರು ಮಹಿಳೆಗೆ ಸಾಮಾಜಿಕ ಮನ್ನಣೆ ದೊರೆಯುವಂತೆ ಮಾಡುವಲ್ಲಿ ಶ್ರಮಿಸಿದರು. ಬಾಬಾಸಾಹೇಬ್ ಅಂಬೇಡ್ಕರರು ಕಾನೂನು ಸಚಿವರಾಗಿದ್ದಾಗ ಹಿಂದೂ ಕೋಡ್ ಬಿಲ್ ಪಾಸ್ ಮಾಡುವ ಮೂಲಕ ಹಿಂದೂ ಮಹಿಳೆಯರಿಗೆ ಆಸ್ತಿಯಲ್ಲಿ ಹಕ್ಕು ಸಿಗುವಂಥ ಕಾನೂನು ತರಲು ಪ್ರಯತ್ನಿಸಿದ್ದರು. ಸವರ್ಣೀಯ ನಾಯಕರು ಈ ಮಹತ್ಕಾರ್ಯಕ್ಕೆ ವಿರೋಧ ವ್ಯಕ್ತಪಡಿಸಿದಾಗ ಸಚಿವ ಸ್ಥಾನಕ್ಕೆ ರಾಜೀನಾಮೆ ನೀಡಿ ನೆಹರೂ ಸಂಪುಟದಿಂದ ಹೊರಬಿದ್ದರು.

ಇತ್ತೀಚಿನ ವರ್ಷಗಳಲ್ಲಿ ಮಹಿಳೆ ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಸಾಕಷ್ಟು ಮನ್ನಣೆಗಳಿಸಿದ್ದಾಳೆ. ಸಂಘ ಸಂಸ್ಥೆಗಳ ಮತ್ತು ಪಂಚಾಯತ್ ಚುನಾವಣೆಗಳಲ್ಲಿ ಲಭಿಸಿದ ಮೀಸಲಾತಿ ಆಕೆಯ ಮೇಲೆ ಹೊಸ ಜವಾಬ್ದಾರಿಗಳನ್ನು ಹೇರಿದೆ. ಈ ಜವಾಬ್ದಾರಿ ನಿಭಾಯಿಸುವಲ್ಲಿ ತಾನು ಸಮರ್ಥ ಎಂಬುದನ್ನು ಆಕೆ ಈಗಾಗಲೇ ತೋರಿಸಿಕೊಟ್ಟಿದ್ದಾಳೆ.

ಅಭಿವೃದ್ಧಿಶೀಲ ದೇಶಗಳಾದ ಭಾರತ, ಪಾಕಿಸ್ತಾನ, ಬಾಂಗ್ಲಾದೇಶ ಮತ್ತು ಶ್ರೀಲಂಕಾಗಳಲ್ಲಿ ಸ್ತ್ರೀಯರು ದೇಶದ ಚುಕ್ಕಾಣಿ ಹಿಡಿಯಲು ಸಾಧ್ಯ ಎಂಬುದನ್ನು ತೋರಿಸಿಕೊಡಲಾಗಿದೆ. ಈ ರೀತಿಯಾಗಿ ಮಹಿಳೆ ಆರ್ಥಿಕವಾಗಿ, ಸಾಮಾಜಿಕವಾಗಿ ಮತ್ತು ರಾಜಕೀಯವಾಗಿ ಮುಂದೆ ಬರುತ್ತಿದ್ದರೂ ವಿಚಿತ್ರವಾದ ಸಾಂಸ್ಕೃತಿಕ ಸನ್ನಿವೇಶದಲ್ಲಿ ಸಿಲುಕಿದ್ದಾಳೆ; 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂದು ಹೇಳುವ ಸಂಸ್ಕೃತಿಯಿಂದ ಹೆಣ್ಣು ಲೈಂಗಿಕ ಉದ್ದಿಮೆಯ ಸಂಪನ್ಮೂಲ ಎಂಬ ಭಾವ ಬರುವ ಸಂಸ್ಕೃತಿಯ ಬೀಜಗಳು ಕಾಣಿಸಿಕೊಳ್ಳುತ್ತಿರುವಂಥ ವ್ಯವಸ್ಥೆಯನ್ನು ತಲುಪುತ್ತಿದ್ದೇವೆ. ನಾಗರಿಕತೆಯ ನಡುವೆ ರೂಪಗೊಂಡ ಮದುವೆ ಎಂಬ ಸಂಸ್ಥೆ ನಿಧಾನ ಗತಿಯಲ್ಲಿ ಶಿಥಿಲಗೊಳ್ಳುತ್ತಿದೆ. ಮಧ್ಯದಲ್ಲಿ ಉದ್ಭವವಾದ ಈ ಸಂಸ್ಥೆ ಮಧ್ಯದಲ್ಲೇ ಮಾಯವಾಗುವ ಸಾಧ್ಯತೆಗಳಿವೆ. ಇಂದಿನ ಅವಸ್ಥೆಯ ಗಂಭೀರತೆಯನ್ನು ಪರಿಗಣಿಸಿದರೆ ಈ ಸಂಸ್ಥೆಗೆ ಕನಿಷ್ಠ 200 ವರ್ಷಗಳ ಭವಿಷ್ಯವಾದರೂ ಇದೆಯೊ ಇಲ್ಲವೊ ಎಂಬ ಸಂಶಯ ಬರುತ್ತದೆ.

ಗಂಡಿಗಿಂತಲೂ ಹೆಚ್ಚಿನ ಜವಾಬ್ದಾರಿಗಳನ್ನು ಹೊರುವ ಹಾಗೂ ಗಂಡಿಗಿಂತಲೂ ಹೆಚ್ಚು ಕೆಲಸ ಮಾಡುವ (ಆಕೆ ನಿಭಾಯಿಸುವ ಅನೇಕ ಕರ್ತವ್ಯಗಳು ಗಣನೆಗೆ ಬಾರದೆ ಇರುವುದು ನಾಗರಿಕತೆಯ ದುರಂತವಾಗಿದೆ) ಹೆಣ್ಣು ತನಗಿರುವ ಜವಾಬ್ದಾರಿಗಳೊಂದಿಗೆ ತನ್ನ ಸ್ವಾತಂತ್ರ್ಯಕ್ಕಾಗಿ ಹೋರಾಡಲು ಹೆಚ್ಚು ಹೆಚ್ಚು ಸಂಘ ಶಕ್ತಿಯನ್ನು ಪಡೆದುಕೊಳ್ಳಬೇಕಾಗಿದೆ. ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಪ್ರಜ್ಞಾವಲಯವನ್ನು ವಿಸ್ತರಿಸಿಕೊಳ್ಳಬೇಕಿದೆ.

ಈ ಎಲ್ಲ ಕ್ಷೇತ್ರಗಳಲ್ಲಿ ಹೆಣ್ಣು ಮುಂದೆ ಬರಲು ಸಾಕಷ್ಟು ಅವಕಾಶಗಳಿವೆ. ಆದರೆ ಆಕೆ ದೈನಂದಿನ ಬದುಕಿನಲ್ಲಿ ಏಳ್ಗೆ ಸಾಧಿಸುವುದೇ ಮುಖ್ಯ ಗುರಿಯಾಗಿ ಮಾಡಿಕೊಂಡರೆ ವ್ಯವಸ್ಥೆಗೆ ಬಲಿಯಾಗುತ್ತ ಮುಂದುವರಿಯುವುದು ತಪ್ಪದು.

ರಾಜಕೀಯ ಸ್ಥಾನಮಾನಗಳ ಮೂಲಕ ಸಾಮಾಜಿಕ ಮತ್ತು ಆರ್ಥಿಕ ವಲಯದಲ್ಲಿ ಬದಲಾವಣೆ ತರಲು ಲಭ್ಯವಾಗಿರುವ ಅಲ್ಪ

ಸ್ವಲ್ಪ ಅವಕಾಶಗಳನ್ನು ಆಕೆ ಬಳಸಿಕೊಳ್ಳುವುದು ಅವಶ್ಯವಾಗಿದೆ. ಸಾಂಸ್ಕೃತಿಕ ವಲಯದಲ್ಲಿ ಹೆಚ್ಚು ಹೆಚ್ಚು ಸಂಘಟಿತಳಾಗಿ ಬೆಳೆಯುತ್ತ 'ಮಹಿಳಾ ಸ್ವಾತಂತ್ರ್ಯ ಎಂಬುದು ಇಡೀ ಸಮಾಜವನ್ನು ಬಿಡುಗಡೆಗೊಳಿಸುವ ಬಯಕೆಯ ಸಂಕೇತ' ಎಂಬುದನ್ನು ಸಾಧಿಸಿ ತೋರಿಸಬೇಕಿದೆ.

ಮಹಿಳೆಯ ಸ್ವಾತಂತ್ರ್ಯ ಪುರುಷನ ಸ್ವಾತಂತ್ರ್ಯಕ್ಕೆ ಪೂರಕವಾಗಿದೆ. ಆತ ದುರಭಿಮಾನದಿಂದ ಕೂಡಿದ ಮೇಲರಿಮೆಯಿಂದಾಗಿ ನರಳುತ್ತಿರುವ ಕಾರಣ ಸ್ವಾತಂತ್ರ್ಯ ಅನುಭವಿಸಲು ಅನರ್ಹನಾಗಿದ್ದಾನೆ. ಸ್ತ್ರೀ ಸ್ವಾತಂತ್ರ್ಯ ಪಡೆದ ನಂತರವೇ ಪುರುಷ ತನ್ನ ಅಹಂಕಾರದ ಬಂಧನದಿಂದ ಮುಕ್ತನಾಗುವನು. ಮಹಿಳೆಯನ್ನು ಗೌರವಿಸುವುದರ ಮೂಲಕ ಮಾತ್ರ ಆತ ಗೌರವಕ್ಕೆ ಅರ್ಹನಾಗುವನು.

ಈ ಹಿನ್ನೆಲೆಯಲ್ಲಿ ಮದುವೆ ಎಂಬುದು ಕೇವಲ ಸಂಪ್ರದಾಯದಿಂದ ಬಂದ ಬಳುವಳಿಯಾಗದೆ ಎರಡು ಮನಸ್ಸುಗಳ ಸಮ್ಮಿಲನವಾಗಬೇಕು.

ನಾನು ಲೆನಿನ್‌ಗ್ರಾಡ್‌ನಲ್ಲಿ ಸುತ್ತಾಡುವಾಗ ನನ್ನ ಗೈಡ್‌ಗೆ ಹೇಳಿದೆ: ''ಈ ಕಾರು ಚಾಲಕ ಎಷ್ಟೊಂದು ವಿನಯವಂತರಾಗಿದ್ದಾರೆ. ಇವರ ಗಾಂಭೀರ್ಯ, ಸರಳತೆ, ಸೇವಾ ಮನೋಭಾವ ನನ್ನ ಮನಸ್ಸನ್ನು ಸೂರೆಗೊಂಡಿವೆ. ಸುಂದರ ಕಾಯದ ಎತ್ತರದ ನಿಲುವಿನ ಆ ವಯೋವೃದ್ಧ ಶಾಂತಿ ಸಮಾಧಾನಗಳಿಂದ ಕೂಡಿದ ಮಹಾಪುರುಷನ ಹಾಗೆ ಕಾಣುತ್ತಾರೆ.'' ಗೈಡ್ ಹೇಳಿದಳು: ''ಅವರು ಎರಡನೇ ಮಹಾಯುದ್ಧದಲ್ಲಿ ಈ ದೇಶದ ಅತ್ಯುನ್ನತ ವೀರಪ್ರಶಸ್ತಿ ಪಡೆದ ಸೈನಿಕ ಅಧಿಕಾರಿ ಆಗಿದ್ದರು. ನಿವೃತ್ತಿಯ ನಂತರ ಕಾರು ಚಾಲಕ ಆಗಿ ಸೇವೆ ಸಲ್ಲಿಸುತ್ತಿದ್ದಾರೆ.''

ನಾನು ಆ ಡ್ರೈವರ್‌ಗೆ ಹೇಳಿದೆ: ''ನೀವು ಸುಖಪುರುಷನ ಹಾಗೆ ಕಾಣುತ್ತೀರಿ''. ಗೈಡ್ ನನ್ನ ಇಂಗ್ಲಿಷ್ ಹೇಳಿಕೆಯನ್ನು ರಷ್ಯನ್ ಭಾಷೆಗೆ ಅನುವಾದಿಸಿದಳು. ಆತ ನಗುತ್ತ ಹೇಳಿದ: ''ನಾನು ನಿಜವಾಗಿಯೂ ಸುಖ ಪುರುಷ. ಇದಕ್ಕೆ ಎರಡು ಕಾರಣಗಳಿವೆ. ಮೊದಲನೆಯದಾಗಿ ನನ್ನ ದೇಶದ ರಕ್ಷಣೆಗಾಗಿ ಹೋರಾಡಿದ್ದೇನೆ. ಎರಡನೆಯದಾಗಿ ಕಳೆದ 40 ವರ್ಷ ನಾನು ಮತ್ತು ನನ್ನ ಹೆಂಡತಿ ಅನ್ಯೋನ್ಯವಾಗಿ ಬದುಕುತ್ತಿದ್ದೇವೆ. ನನಗೆ ಮಗಳು ಮತ್ತು ಮೊಮ್ಮಗಳು ಇದ್ದಾರೆ. ನಾವೆಲ್ಲ ಅನ್ಯೋನ್ಯವಾಗಿ ಇದ್ದೇವೆ. ಈ ಎರಡು ಕಾರಣಗಳಿಂದ ನಾನು ಸುಖಪುರುಷ!''

ವಿಶ್ವದಲ್ಲೇ ಅತಿ ಹೆಚ್ಚು ವಿವಾಹ ವಿಚ್ಛೇದನವಾಗುವ ದೇಶದಲ್ಲಿ, ಮದುವೆಯಾಗದೆ ಮಕ್ಕಳನ್ನು ಪಡೆಯುವುದಕ್ಕೆ ಸಾಮಾಜಿಕ ಮನ್ನಣೆ ದೊರೆತ ದೇಶದಲ್ಲಿ, ಇಂಥ ಒಂದು ಸುಂದರ ಕುಟುಂಬ ಸ್ತ್ರೀ ಮತ್ತು ಪುರುಷ ಸ್ವಾತಂತ್ರ್ಯಕ್ಕೆ ದಾರಿ ತೋರಿಸಬಹುದಲ್ಲವೆ?

**ಸವಾಲು**

# ನ್ಯಾಯಕ್ಕಾಗಿ ಕಾದಿರುವ ದಿಟ್ಟ ಮಹಿಳೆ - ಭಾನ್ವರಿ ದೇವಿ

ಮೂರು ವರ್ಷಗಳ ಹಿಂದೆ, ಒಂದು ವರ್ಷದ ಕೂಸಿನ ಬಾಲ್ಯ ವಿವಾಹವನ್ನು ನಿಲ್ಲಿಸಿದ ಕಾರಣಕ್ಕೆ, ನಾಲ್ಕು ಜನ ಧಾಂಡಿಗರಿಂದ ಅತ್ಯಾಚಾರಕ್ಕೆ ಭಾನ್ವರಿ ದೇವಿ ಒಳಗಾಗಿದ್ದಳು. ಈಕೆಯ ಮೇಲೆ ಅತ್ಯಾಚಾರ ಎಸಗಿದ ಆರೋಪದ ಮೇಲೆ ಬಂಧಿಸಿದ್ದ ನಾಲ್ವರನ್ನು ನ್ಯಾಯಾಲಯ 'ತಮ್ಮ ವಯಸ್ಸು, ಜಾತಿ ಮರೆತು ಇಂಥಾ ಕೆಲಸ ಮಾಡುವಷ್ಟು ನಮ್ಮ ಭಾರತೀಯ ಸಂಸ್ಕೃತಿ ಅಧೋಗತಿಗಿಳಿದಿಲ್ಲ' ಎಂದು ಸಾರಿ ಇತ್ತೀಚೆಗೆ ಬಿಡುಗಡೆ ಮಾಡಿರುವುದು, ಮಹಿಳಾ ಜಾಗೃತಿಗೆ ಹೋರಾಡುತ್ತಿರುವ ಪ್ರತಿಯೊಬ್ಬರಿಗೂ ಆಘಾತವೆನಿಸಿದೆ; ಎಂಭತ್ತರ ದಶಕದ ಮಹಿಳಾ ಹೋರಾಟದ ಫಲವಾಗಿ ಸಾಧಿಸಿದ್ದ ಮಾನಭಂಗದ ಕೇಸುಗಳಲ್ಲಿಯ ಸುಧಾರಣೆಗಳನ್ನು ನಿರ್ಲಕ್ಷಿಸಿದ ಭಾವ ಕಾಡುತ್ತಿದೆ.

ನವೆಂಬರ್ 1995, ಜಯಪುರ ಡಿಸ್ಟ್ರಿಕ್ಟ್ ಮತ್ತು ಸೆಷನ್ಸಿನ ನ್ಯಾಯಾಧೀಶರು ಭಾನ್ವರಿಯ ಮಾನಭಂಗದ ಐದು ಮಂದಿ ಆರೋಪಿತರನ್ನು ಬಿಡುಗಡೆ ಮಾಡಿದರು. ಅದಕ್ಕೆ ಕೊಟ್ಟ ಕಾರಣ ಭಾನ್ವರಿಯ ಮೇಲೆ ಅವರಿಂದ ಅತ್ಯಾಚಾರ ಆಯಿತೆಂಬುದಕ್ಕೆ ಪುರಾವೆಗಳಿಲ್ಲವೆಂಬುದು. ಭಾನ್ವರಿಯ ವೈದ್ಯಕೀಯ ತಪಾಸಣೆ ಬಹಳ ತಡವಾಗಿತ್ತು ಎಂಬುದನ್ನಿಲ್ಲಿ ಜ್ಞಾಪಿಸಿಕೊಳ್ಳಬಹುದು. ಜೊತೆಗೆ ನ್ಯಾಯಾಧೀಶರು 'ಈ ಆರೋಪಿತರು 50 ರಿಂದ 60ರ ವಯಸ್ಸಿನಲ್ಲಿದ್ದು, ಗೌರವಾನ್ವಿತ ಕುಟುಂಬದಿಂದ ಬಂದವರು, ಅವರು ಮಾನಭಂಗ ಮಾಡಲು ಸಾಧ್ಯವಿಲ್ಲ' ಎಂದೂ ಘೋಷಿಸಿದರು.

**ತಮ್ಮ ವೃತ್ತಿಯಿಂದ ಹಾಗೂ ಬರಹಗಳಿಂದ ಪ್ರಸಿದ್ಧರಾದ ನ್ಯಾಯವಾದಿ ಹೇಮಲತಾ ಮಹಿಷಿ ಅವರು ಈ ಕೇಸಿನ ತೀರ್ಪಿನ ಮೇಲೆ ಬೆಳಕು ಚೆಲ್ಲಿದ್ದಾರೆ.**

ಡಿಫೆನ್ಸ್ ಕೌನ್ಸಿಲರ ವಾದವಿದ್ದದ್ದು 'ತಮ್ಮ ಭಾರತೀಯ ಸಂಸ್ಕೃತಿ ಇನ್ನೂ ಅಂಥಾ ದುರವಸ್ಥೆಗೆ ಇಳಿದಿಲ್ಲ, ತಮ್ಮ ವಯಸ್ಸು, ಜಾತಿ ಮರೆತು ಹೆಣ್ಣಿನ ಮೇಲೆ ಬೀಳುವಷ್ಟು ಅಧ್ಯಾನವಾಗಿಲ್ಲ' ಎಂಬುದು ನಿಜಕ್ಕೂ ದಿಗ್ಭ್ರಾಂತಿ ಹುಟ್ಟಿಸುತ್ತದೆ. 'ಅಗ್ನಿಸಾಕ್ಷಿಯಾಗಿ ಕೈಹಿಡಿದ ಯಾವ ಗಂಡನೂ ತನ್ನೆದುರೇ ಹೆಂಡತಿಯ ಅತ್ಯಾಚಾರ ನಡೆಯಲು ಬಿಡುವುದಿಲ್ಲ' ಎಂದೂ ಸೇರಿಸಿದ್ದಾರೆ.

ಮಥುರಾ ಮಾನಭಂಗ ಪ್ರಕರಣದ ತೀರ್ಪು ಹೊರಬಂದು, ದೇಶದಾದ್ಯಂತ ಮಹಿಳೆಯರನ್ನು ಕೆರಳಿಸಿ, ಮಾನಭಂಗಕ್ಕೆ ಸಂಬಂಧಿಸಿದ ಕಾನೂನನ್ನು ತಿದ್ದುಪಡಿಮಾಡಬೇಕೆಂಬ ಚಳುವಳಿ ತೀವ್ರವಾದಾಗ ನಮ್ಮ ದೇಶದ ಭಾರತೀಯ ದಂಡ ಸಂಹಿತೆ, ದಂಡ ಪ್ರಕ್ರಿಯಾ ಸಂಹಿತೆ ಹಾಗೂ ಸಾಕ್ಷ್ಯ ಅಧಿನಿಯಮಗಳಲ್ಲಿ ಹಲವಾರು ತಿದ್ದುಪಡಿಗಳಾದವು. ಅದರೊಂದಿಗೆ ಸರ್ವೋಚ್ಚ ನ್ಯಾಯಾಲಯದ ನಂತರದ ತೀರ್ಪುಗಳು ಮಾನಭಂಗಕ್ಕೆ ಒಳಗಾದ ಮಹಿಳೆಯರ ನೆರವಿಗೆ ಬಂದವು. ಅತ್ಯಾಚಾರಕ್ಕೆ ಒಳಗಾದ ಮಹಿಳೆಯ ಮೈಮೇಲೆ ಗಾಯಗಳಿಲ್ಲದಿದ್ದಲ್ಲಿ, ಅವಳ ಸಾಕ್ಷ್ಯವನ್ನು ಬೆಂಬಲಿಸುವ ಬೇರೆಯ ಸಾಕ್ಷ್ಯವಿಲ್ಲದಿದ್ದಲ್ಲಿ, ವೈದ್ಯಕೀಯ ಸಾಕ್ಷ್ಯದ ಆಧಾರವಿಲ್ಲದಿದ್ದಲ್ಲಿ ಅತ್ಯಾಚಾರಕ್ಕೆ ಒಳಗಾದೆನೆಂದು ಹೇಳುವ ಮಹಿಳೆಯ ಸಾಕ್ಷ್ಯವನ್ನು ನಂಬಲಾಗದು ಎನ್ನುವ ನ್ಯಾಯಾಲಯದ ಧೋರಣೆ ಇಂದು ಬದಲಾಗಿದೆ. ಸಾಮಾನ್ಯವಾಗಿ ಭಾರತೀಯ ಮಹಿಳೆ ನಮ್ಮ ದೇಶದಲ್ಲಿನ ಸಾಂಸ್ಕೃತಿಕ, ಧಾರ್ಮಿಕ, ಸಾಮಾಜಿಕ ಸಂದರ್ಭಗಳಿಂದಾಗಿ ತಾನು ಅತ್ಯಾಚಾರಕ್ಕೆ ಒಳಗಾಗಿದ್ದೇನೆಂದು ಸುಳ್ಳು ಹೇಳಿ ದೂರು ಕೊಡುವ ಸಂಭವ ಇಲ್ಲವೆಂದು ಒಂದು ತೀರ್ಪಿನಲ್ಲಿ ಸರ್ವೋಚ್ಚ ನ್ಯಾಯಾಲಯ ತಿಳಿಸುತ್ತಾ, ಅತ್ಯಾಚಾರಕ್ಕೆ ಒಳಗಾದ ಮಹಿಳೆಯ ಸಾಕ್ಷ್ಯಕ್ಕೆ ಕೊಡಬೇಕಾದ ಮಹತ್ವದ ಬಗ್ಗೆ ಗಮನ ಸೆಳೆದಿದೆ. 1983ರ ಕ್ರಿಮಿನಲ್ ಕಾನೂನು (ತಿದ್ದುಪಡಿ) ಅಧಿನಿಯಮದ ಅನುಸಾರ, ಆರೋಪಿಗಳ ಲೈಂಗಿಕ ಕ್ರಿಯೆಯು ರುಜುವಾತಾದಾಗ, ಅದಕ್ಕೆ ಫಿರ್ಯಾದಿ-ಮಹಿಳೆಯ ಒಪ್ಪಿಗೆ ಇತ್ತೇ ಎಂಬ ಪ್ರಶ್ನೆ ಬಂದಾಗ, ಅವಳು ತನ್ನ ಒಪ್ಪಿಗೆ ಇರಲಿಲ್ಲವೆಂದು ತಿಳಿಸಿದರೆ ಸಾಕು, ನ್ಯಾಯಾಲಯವು ಆ ರೀತಿ ಪೂರ್ವಭಾವನೆ ಮಾಡಬೇಕಾಗುತ್ತದೆ. ಅಂತಹ ಸಂದರ್ಭದಲ್ಲಿ ಅವಳ ಒಪ್ಪಿಗೆ ಆ ಲೈಂಗಿಕ ಕ್ರಿಯೆಗೆ ಇತ್ತೆಂದು ರುಜುವಾತುಪಡಿಸುವ ಭಾರ ಆರೋಪಿಗಳ ಮೇಲೆ ಬೀಳುತ್ತದೆ.

ಈ ರೀತಿ ಇಷ್ಟೆಲ್ಲಾ ಚಳುವಳಿ, ತಿದ್ದುಪಡಿ, ಸರ್ವೋಚ್ಚ ನ್ಯಾಯಾಲಯದ ತೀರ್ಪುಗಳ ನಂತರ ಆ ಅತ್ಯಾಚಾರಕ್ಕೆ ಒಳಗಾದ ಮಹಿಳೆಯರಿಗೆ ನ್ಯಾಯಾಲಯದಲ್ಲಿ ನ್ಯಾಯ ಸಿಗುವ ಬಗ್ಗೆ ಆಶಾಭಾವನೆ ಮೂಡತೊಡಗಿತ್ತು. ಆದರೆ, ಇತ್ತೀಚಿನ ಭಾನ್ವರಿ ದೇವಿ ಅತ್ಯಾಚಾರ ಪ್ರಕರಣದ ತೀರ್ಪು, ಪುನಃ ನಾವು ಮಥುರಾ ಅತ್ಯಾಚಾರ ಪ್ರಕರಣದ ಕಾಲಕ್ಕೆ ಹಿಂತಿರುಗುತ್ತಿದ್ದೇವೆಂಬ ಹತಾಶ ಭಾವನೆಯನ್ನು ಉಂಟುಮಾಡಿದೆ.

ಭಾನ್ವರಿ ದೇವಿ ಮೊಕದ್ದಮೆಯಲ್ಲಿ ಅವಳ ಮೇಲೆ ಅತ್ಯಾಚಾರವೆಸಗಲು 'ಮೋಟಿವ್' ಇತ್ತು, ಅತ್ಯಾಚಾರಕ್ಕೆ ಒಳಗಾದ ಅವಳ ಬಲವಾದ ಸಾಕ್ಷ್ಯ ಇತ್ತು, ಅದನ್ನು ಬೆಂಬಲಿಸಲು ಪ್ರತ್ಯಕ್ಷ ಸಾಕ್ಷಿಯಾಗಿ ಅವಳ ಗಂಡನಿದ್ದ, ತನ್ನ ಶೀಲದ ಮೇಲೆ ಬರೆ

ಹಾಕಿಕೊಂಡು ಅವಳು ಸಾಧಿಸಬೇಕಾದುದು ಏನೂ ಇರಲಿಲ್ಲ. ಆದರೂ ಸೆಷೆನ್ಸ್ ನ್ಯಾಯಾಲಯ ಅವಳ ಸಾಕ್ಷ್ಯವನ್ನು ಅನುಮಾನಿಸಿತು. ಒಂದು ತುಂಡು ಜಮೀನಿನ ಬಗ್ಗೆ ಅವರಿಬ್ಬರ ನಡುವೆ ಇದೆ ಎನ್ನಲಾದ ಜಗಳದ ಕಾರಣವಾಗಿ ಅವಳು ತನ್ನ ಮೇಲೆ ಅತ್ಯಾಚಾರದ ಸಾಮಾಜಿಕ ಕಳಂಕ ಹೊತ್ತು, ಸುಳ್ಳು ಆರೋಪ ಮಾಡಿದ್ದಾಳೆಂಬುದನ್ನು ನಂಬಿತು. ಯಾವ ಸಂದರ್ಭದಲ್ಲಿ ಅವಳಿಗೆ ವೈದ್ಯರ - ಪೋಲಿಸರ ಸಕಾಲಿಕ ನೆರವು ದೊರೆಯದೇ ಹೋಯಿತೆಂಬುದನ್ನು ಕಡೆಗಣಿಸಿ, ವೈದ್ಯಕೀಯ ಸಾಕ್ಷ್ಯ ಅವಳ ಪರವಾಗಿಲ್ಲವೆಂದು ಹೇಳಿತು. ಗುಂಪು ಅತ್ಯಾಚಾರಕ್ಕೆ ಒಳಗಾದ ಮಹಿಳೆ ಎಷ್ಟು ಅಸಹಾಯಳಾಗಿರುತ್ತಾಳೆಂಬುದನ್ನು ಕಡೆಗಣಿಸಿ, ಅವಳ ಮೈಮೇಲೆ ಗಾಯವಿಲ್ಲವೆಂದು ಹೇಳಿತು. ಆ ಸಂದರ್ಭದಲ್ಲಿ ಅವಳ ಗಂಡನ ಅಸಾಯಕತೆಯನ್ನು ಅನುಮಾನದಿಂದ ನೋಡಿತು. ಮುಖ್ಯವಾಗಿ, ಮೇಲಿನ ಜಾತಿಯ, ಮೇಲಿನ ವರ್ಗದ 'ಗೌರವಾನ್ವಿತ' ವ್ಯಕ್ತಿಗಳು ಆ ರೀತಿ ಕೆಳವರ್ಗದ ಮಹಿಳೆಯ ಮೇಲೆ ಅತ್ಯಾಚಾರ ಮಾಡುವುದು ಅಸಂಭವವೆಂದೂ, ಅದು 'ನಮ್ಮ ದೇಶದ ಗ್ರಾಮೀಣ ಸಂಸ್ಕೃತಿ'ಗೆ ವಿರುದ್ಧವೆಂದೂ ಹೇಳಿತು. ಇದು ನ್ಯಾಯಾಧೀಶರಿಗೆ ದೇಶದ ಬಗ್ಗೆ, ನಮ್ಮ ಸಂಸ್ಕೃತಿಯ ಬಗ್ಗೆ ಇರುವ ಅಭಿಮಾನವನ್ನು ಸೂಚಿಸಿದರೂ, ಯಾವುದೇ ವಾಸ್ತವಾಂಶಗಳನ್ನು ಆ ಅಭಿಪ್ರಾಯ ಆಧರಿಸಿಲ್ಲ. ನ್ಯಾಯಾಲಯದಲ್ಲಿ, ನ್ಯಾಯಾಧೀಶರ ವ್ಯಕ್ತಿಗತ ಅಭಿಪ್ರಾಯಗಳು ಏನೇ ಇದ್ದರೂ, ತೀರ್ಪು ವಾಸ್ತವಾಂಶಗಳನ್ನು, ಸಾಕ್ಷ್ಯಗಳನ್ನು ಆಧರಿಸಿರಬೇಕಾಗುತ್ತದೆ. ನಮ್ಮ ಸುತ್ತ ಮುತ್ತ ನಡೆಯುತ್ತಿರುವ ಘಟನೆಗಳನ್ನು ತೆರೆದ ಕಣ್ಣಿನಿಂದ ನೋಡಬೇಕಾಗುತ್ತದೆ. ಇಂದು ಪ್ರತಿ ದಿನ ಪತ್ರಿಕೆಗಳಲ್ಲಿ 1 ವರ್ಷದ ಬಾಲಕಿಯಿಂದ ಹಿಡಿದು ವಯಸ್ಸಾದ ಹೆಂಗಸರವರೆಗೆ ಅವರ ಮೇಲಾದ ಅತ್ಯಾಚಾರದ ವರದಿಗಳು ಬರುತ್ತಲೇ ಇವೆ. ನಮ್ಮ ಪವಿತ್ರ ಭಾರತ ಭೂಮಿಯಲ್ಲೇ, ಪುರುಷನ ಲೈಂಗಿಕ ಕಾಹಿಲೆಗೆ ಕುಮಾರಿಯಾದ ಬಾಲಕಿಯೊಂದಿಗೆ ಲೈಂಗಿಕ ಕ್ರಿಯೆ ನಡೆಸುವುದೇ ಮದ್ದೆಂಬ ಬಲವಾದ ನಂಬಿಕೆ ಇದೆ. ಮನೆಯ ನಾಲ್ಕು ಗೋಡೆಗಳ ನಡುವೆಯೇ 'ಗೌರವಾನ್ವಿತ ವ್ಯಕ್ತಿಗಳು' ತಮ್ಮ ಆಶ್ರಯದಲ್ಲಿರುವ ನಾದಿನಿಯರ ಮೇಲೆ ಅತ್ಯಾಚಾರವೆಸುಗುತ್ತಾರೆ. ತಮ್ಮ ಅಪ್ರಾಪ್ತ ಹೆಣ್ಣು ಮಕ್ಕಳನ್ನು ಬಿಡುವುದಿಲ್ಲ, ತಮ್ಮ ಸಹಾಯ ಕೇಳಿಬಂದ ಮಹಿಳೆಯರ ಮೇಲೆ ಪೋಲಿಸರು ಅತ್ಯಾಚಾರವೆಸಗುತ್ತಾರೆ, ಅನಾಥಾಶ್ರಮದ ಹೆಸರಿನಲ್ಲಿ ಸ್ವಾಮೀಜಿಗಳು, ಅವರ ಮೂಲಕ ರಾಜಕಾರಣಿಗಳು, ಸಮಾಜದ ಗೌರವಾನ್ವಿತ ವ್ಯಕ್ತಿಗಳು ಮುಗ್ಧ ಬಾಲಕಿಯರ ಲೈಂಗಿಕ ಶೋಷಣೆ ನಡೆಸುತ್ತಾರೆ. ಬಸ್ಸುಗಳಲ್ಲಿ, ರಸ್ತೆಗಳಲ್ಲಿ ಶಾಲಾ - ಕಾಲೇಜಿಗೆ ಹೋಗುವ ಹುಡುಗಿಯರಿಗೆ ಲೈಂಗಿಕ ಹಿಂಸೆಗಳಾಗುತ್ತವೆ. ಕಚೇರಿಗಳಲ್ಲಿ ಮಹಿಳಾ ಉದ್ಯೋಗಿಗಳು ತರ-ತರಹದ ಲೈಂಗಿಕ ಕೀಟಲೆ ಸಹಿಸಿಕೊಳ್ಳಬೇಕಾಗುತ್ತದೆ. ಗ್ರಾಮೀಣ ಪ್ರದೇಶಗಳಲ್ಲಿ ಕೂಲಿಕಾರ ಹೆಣ್ಣು ಮಕ್ಕಳಿಗೆ, ಹೊರಗೆ ಮೈಮುರಿದು ದುಡಿದು ತಿನ್ನಬೇಕಾದ ಮಹಿಳೆಯರಿಗೆ ರಕ್ಷಣೆ ಇಲ್ಲ. ಇದು ಇಂದಿನ ಭಾರತದಲ್ಲಿರುವ ನಗ್ನ ಸತ್ಯ. ಕಲ್ಪನೆಯ ಆದರ್ಶ ಈ ನಗ್ನಸತ್ಯವನ್ನು ಮರೆಮಾಚಲಾರದು. ವಾಸ್ತವತೆಯ ಸತ್ಯ ಎಷ್ಟೇ ಕರಾಳವಾಗಿದ್ದರೂ, ಅದೇ ನ್ಯಾಯದ ಅಡಿಗಲ್ಲಾಗಬೇಕು.

**ಸವಾಲು**

## ಮಹಿಳಾ ಶಿಕ್ಷಣ, ಮಾನವಾಭಿವೃದ್ಧಿ ಮತ್ತು ಎನ್.ಇ.ಪಿ.

ಸಮಾಜವೊಂದರ ಅಭಿವೃದ್ಧಿಯನ್ನು ಮಾಪನ ಮಾಡುವಾಗ ಗಣನೆಗೆ ತೆಗೆದುಕೊಳ್ಳುವ ಕೆಲವು ಮುಖ್ಯ ಅಂಶಗಳಲ್ಲಿ ಪ್ರಮುಖವಾದುದು ಮಾನವಾಭಿವೃದ್ಧಿಯ ಪ್ರಮಾಣ. ವ್ಯಕ್ತಿಯೊಬ್ಬನ ವಾರ್ಷಿಕ ಆದಾಯ, ಸರಾಸರಿ ಜೀವನಾವಧಿ ಮತ್ತು ವಯಸ್ಕರ ಸಾಕ್ಷರತೆ - ಈ ಅಂಶಗಳ ಸಂಯೋಜನೆಯು ಮಾನವಾಭಿವೃದ್ಧಿಯನ್ನು ನಿರ್ಣಯಿಸುವ ಮಾನದಂಡವಾಗಿದೆ. ನೇತ್ಯಾತ್ಮಕವಾಗಿ ಹೇಳುವುದಾದರೆ, ಮಾನವಾಭಿವೃದ್ಧಿಯನ್ನು ಕುಂಠಿತಗೊಳಿಸುವ ಅಂಶಗಳನ್ನೂ ಈ ಮೂಲಕವೇ ಗುರುತಿಸಬಹುದು. ಮಾನವಾಭಿವೃದ್ಧಿಯ ವಿಷಯಾನುಕ್ರಮಣಿಯಲ್ಲಿ ಶಿಕ್ಷಣ ಒಂದು ಮುಖ್ಯ ಘಟಕ.

1986ರ ರಾಷ್ಟ್ರೀಯ ಶಿಕ್ಷಣ ನೀತಿಯು (National Education Policy) ಮಹಿಳೆಯ ಶಿಕ್ಷಣಕ್ಕಾಗಿ ಸ್ಪಷ್ಟ ಗುರಿಗಳನ್ನು ಮಂಡಿಸಿತು. ರಾಷ್ಟ್ರೀಯ ಶಿಕ್ಷಣ ನೀತಿಯು, ನೂತನ ಶಿಕ್ಷಣ ನೀತಿಯ ಪರಿಣಾಮವನ್ನು ವ್ಯಾಪಕಗೊಳಿಸುವುದಕ್ಕಾಗಿ, ಸಾಕ್ಷರತೆಯ ದೃಷ್ಟಿಯಿಂದ ವಿಶೇಷ ಆಸ್ಥೆಯನ್ನು ಬೇಡುವ ಕೆಲವು ಕ್ಷೇತ್ರಗಳನ್ನು ಗುರುತಿಸಿತು. ಈ ವಿಶೇಷ ಆಸ್ಥೆಗಳ ಪಟ್ಟಿಯು 1992ರ 'ಪ್ರಾಯೋಗಿಕ ಕಾರ್ಯಕ್ರಮ'ಗಳ ಪಟ್ಟಿಯಲ್ಲಿದೆ. 'ಪ್ರಾಯೋಗಿಕ ಕಾರ್ಯಕ್ರಮ'ವು ಮಹಿಳೆಯರ ಶೈಕ್ಷಣಿಕ ಅಭಿವೃದ್ಧಿಗೆಂದು ಹಲವು ಕ್ಷೇತ್ರಗಳಿಗೆ ವಿಶೇಷ ಆದ್ಯತೆ ನೀಡಿತು.

ಶಿಕ್ಷಣವು ಪ್ರಮುಖ ಸಂಗತಿಯಾಗಿ ರಾಜ್ಯಾಂಗದಲ್ಲಿ ವ್ಯಕ್ತವಾಗಿದೆ. ಇದರ ಪರಿಣಾಮವಾಗಿ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳೆರಡರ ಆಡಳಿತದ ವ್ಯಾಪ್ತಿಯಲ್ಲಿ ಶಿಕ್ಷಣಕ್ಕೆ ವಿಶೇಷ ಅಧಿಕಾರವಿದೆ. ಆ ಕಾರಣ, ರಾಷ್ಟ್ರೀಯ ಮಟ್ಟದಲ್ಲಿ ಸರ್ಕಾರವು ಈ ನೀತಿಯ ಬಗ್ಗೆ ನಕ್ಷೆಯನ್ನು ತಯಾರಿಸಿ, ಅದನ್ನು ಕಾರ್ಯಗತಗೊಳಿಸಲು ಅಗತ್ಯವಾದ ಕ್ರಮಗಳನ್ನು ಕೈಗೊಳ್ಳುವುದರ ಜೊತೆಗೆ, ಇದರ ಅಳವಡಿಕೆಯಲ್ಲಿ ರಾಜ್ಯಗಳು ಎದುರಿಸುವ ಸಮಸ್ಯೆಗಳನ್ನೂ ಗಮನಕ್ಕೆ ತೆಗೆದುಕೊಳ್ಳುತ್ತದೆ. ಮತ್ತು ಯಾವುದೇ ರಾಜ್ಯ ಅಥವಾ ಕ್ಷೇತ್ರ ಅಭಿವೃದ್ಧಿ ಕಾರ್ಯಕ್ರಮದಲ್ಲಿ ಕುಂಠಿತವಾಗದಂತೆ ನಿಗಾ ವಹಿಸುತ್ತದೆ. ಇಂಥ ನೀತಿಯನ್ನು ರೂಪಿಸುವುದು ಅತ್ಯಂತ ಕಠಿಣವಾದ ಕಾರ್ಯವಷ್ಟೇ ಅಲ್ಲ; ಕೇವಲ ಲಿಂಗವನ್ನು ಆಧಾರವಾಗಿಟ್ಟುಕೊಂಡು ಕ್ಷೇತ್ರದ ವಿಂಗಡಣೆ ಮಾಡುವುದು, ಅದರ ಸಂಕೀರ್ಣತೆಯನ್ನು ಹೆಚ್ಚಿಸುತ್ತದೆ. ಪ್ರತಿಯೊಂದು ಪ್ರದೇಶದ ಸಂಪ್ರದಾಯ ಮತ್ತು ರೂಢಿಗಳಲ್ಲಿ ಗಮನಾರ್ಹವಾದ ವ್ಯತ್ಯಾಸವಿದ್ದು, ನಗರ ಮತ್ತು ಗ್ರಾಮೀಣ ಮಟ್ಟದಲ್ಲಿ ಈ ಅಸಮತೋಲನ ಮತ್ತಷ್ಟು ದಟ್ಟವಾಗಿದೆ.

ಕಳೆದ ಆರ್ಥಿಕ ವರ್ಷವು ಹೆಣ್ಣುಮಕ್ಕಳ ದಾಖಲಾತಿ ಪ್ರಮಾಣದಲ್ಲಿ ಗಮನಾರ್ಹವಾದ ಹೆಚ್ಚಳವನ್ನು ಕಂಡಿರುವುದೇ ರಾಷ್ಟ್ರೀಯ ಶಿಕ್ಷಣ ನೀತಿಯ ಹೆಮ್ಮೆಯ ಸಾಧನೆ. ಪ್ರಾಥಮಿಕ ಹಂತದಲ್ಲಿ ಇದರ ಪ್ರಮಾಣ ಶೇಕಡ 43 ಇದ್ದು, ಉನ್ನತ ಮಟ್ಟದಲ್ಲಿ ಶೇಕಡಾ 33 ಇದೆ. ಈ ಪ್ರಮಾಣ, ಸರ್ಕಾರದ ನೀತಿಯು ಸಾಧಿಸಬೇಕೆಂದಿರುವ ಗುರಿಯ ಪರವಾಗಿದೆ. ಮಹಿಳಾ ಶಿಕ್ಷಣದ ಪ್ರಾಮುಖ್ಯತೆಯನ್ನು ಅರಿತ ಸರ್ಕಾರ, ಶೇಕಡಾ 50ರಷ್ಟು ಮಹಿಳೆಯರನ್ನು ಪ್ರಾಥಮಿಕ ಮಟ್ಟದ ಶಿಕ್ಷಣದಲ್ಲಿ ಅಧ್ಯಾಪಕಿಯರನ್ನಾಗಿ ನೇಮಕಗೊಳಿಸುವ ಗುರಿಯನ್ನು ಹೊಂದಿತ್ತು. ಮಂಜೂರಾದ ಒಟ್ಟು ಹುದ್ದೆಗಳ ಪೈಕಿ ಶೇಕಡಾ 49ರಷ್ಟು ನಿಶ್ಚಿತ ಗುರಿಯ ಅನುಸಾರ, ಅತ್ಯಂತ ತೃಪ್ತಿಕರವಾಗಿ ಮಹಿಳೆಯರಿಂದಲೇ ತುಂಬಲ್ಪಟ್ಟಿತು.

1991ರ ಅಧ್ಯಯನದ ಪ್ರಕಾರ, ಕೇರಳದಲ್ಲಿ ಮಹಿಳೆಯ ಶಿಕ್ಷಣ 91.99 ರಷ್ಟು ಉನ್ನತ ಮಟ್ಟದಲ್ಲಿದ್ದು, ರಾಜಾಸ್ಥಾನದಲ್ಲಿ 37.17 ರಷ್ಟು ಕೆಳಮಟ್ಟದಲ್ಲಿದೆ. ಪುರುಷರ ಸರಿಸಮಕ್ಕೆ ಮಹಿಳೆಯರು ಶಿಕ್ಷಣ ಪಡೆದಿರುವುದು ನಿಜಕ್ಕೂ ಕೇರಳದ ಹೆಚ್ಚುಗಾರಿಕೆ. ಅದೇ ರಾಜಾಸ್ಥಾನದಲ್ಲಿ ಪ್ರತಿ 100 ಪುರುಷರಿಗೆ 37 ಮಹಿಳೆ ಅಕ್ಷರಸ್ಥಳು. ಉತ್ತರ ಪ್ರದೇಶ, ಬಿಹಾರ್, ದಾದ್ರ ಮತ್ತು ನಾಗರ್‌ಹವೇಲಿ, ಮಧ್ಯ ಪ್ರದೇಶದಲ್ಲಿ ಈ ವ್ಯತ್ಯಾಸದ ನಡುವಿನ ಅಂತರ ನಿಬ್ಬೆರಗಾಗುವಷ್ಟಿದೆ. ಅಲ್ಲದೆ, ಈ ರಾಜ್ಯಗಳ ಒಟ್ಟು ಶಿಕ್ಷಣದ ಪ್ರಮಾಣವೇ 50%ಕ್ಕಿಂತ ಕಡಿಮೆ ಎನ್ನುವುದು ಮತ್ತೊಂದು ಗಮನಾರ್ಹವಾದ ಸಂಗತಿ. ಒರಿಸ್ಸಾ, ಮೇಘಾಲಯದಲ್ಲೂ ಇದೇ ಪ್ರಮಾಣ ಇದ್ದರೂ, ಮಹಿಳೆ ಮತ್ತು ಪುರುಷರ ಶಿಕ್ಷಣದ ಮಟ್ಟದಲ್ಲಿ ಇಷ್ಟೊಂದು ಅಂತರವಿಲ್ಲ. ವಾಸ್ತವಿಕವಾಗಿ ಮೇಘಾಲಯದಲ್ಲಿ ಪ್ರತಿ 100 ಅಕ್ಷರಸ್ಥ ಪುರುಷರಿಗೆ 84 ಅಕ್ಷರಸ್ಥ ಮಹಿಳೆಯರಿದ್ದಾರೆ. ಅರುಣಾಚಲ ಪ್ರದೇಶ ಮತ್ತು ಆಂಧ್ರ ಪ್ರದೇಶದಲ್ಲಿ ಒಟ್ಟು ಶಿಕ್ಷಣದ ಮಟ್ಟ 50ಕ್ಕಿಂತ ಕಡಿಮೆ ಇದ್ದರೂ, ಮಹಿಳೆ ಮತ್ತು ಪುರುಷನ ಶಿಕ್ಷಣದ ನಡುವಿನ ಅಂತರ 50ಕ್ಕಿಂತ ಕಡಿಮೆ ಇದೆ.

1991ರ ಮಹಿಳಾ ಶಿಕ್ಷಣದ ವಿಷಯಾನುಕ್ರಮಣಿಯ ಅವಲೋಕನದಿಂದ 9 ರಾಜ್ಯಗಳಲ್ಲಿ ಮತ್ತು ಸಂಯುಕ್ತ ಸಂಸ್ಥಾನಗಳಲ್ಲಿ ರಾಷ್ಟ್ರೀಯ ಸರಾಸರಿ ಮಟ್ಟಕ್ಕಿಂತ ಕಡಿಮೆ ಇದೆ. ಅವು ಯಾವುವು ಎಂದರೆ, ಒರಿಸ್ಸಾ, ಆಂಧ್ರ ಪ್ರದೇಶ ಅರುಣಾಚಲ ಪ್ರದೇಶ, ಮಧ್ಯ ಪ್ರದೇಶ, ದಾದ್ರ ಮತ್ತು ನಾಗರ್‌ಹವೇಲಿ, ಉತ್ತರ

ಪ್ರದೇಶ, ಬಿಹಾರ್, ರಾಜಾಸ್ಥಾನ ಮತ್ತು ಜಮ್ಮು ಮತ್ತು ಕಾಶ್ಮೀರ. ಜಮ್ಮು ಕಾಶ್ಮೀರದ ಬಗ್ಗೆ 1991ರ ಮಾಹಿತಿಗಳು ಲಭ್ಯ ವಿಲ್ಲದಿದ್ದರೂ, 1981ರ ಮಾಹಿತಿಯ ಅನ್ವಯ, ಮಹಿಳಾ ಶಿಕ್ಷಣದ ಮಟ್ಟ ಆ ರಾಜ್ಯದಲ್ಲಿ ರಾಷ್ಟ್ರೀಯ ಸರಾಸರಿ ಮಟ್ಟವಾದ 39.19%ಕ್ಕಿಂತ ಕಡಿಮೆ ಎಂದು ಸುಲಭವಾಗಿ ನಿರ್ಣಯಿಸಬಹುದು.

ರಾಷ್ಟ್ರೀಯ ಜನಸಂಖ್ಯೆಯಲ್ಲಿ ಅರ್ಧದಷ್ಟು ಭಾಗವು ಮಹಿಳೆಯರದಾಗಿರುವುದರಿಂದ, ಅಕ್ಷರಸ್ಥ ಮಹಿಳೆಯರ ಸಂಖ್ಯೆಯು ಗಣನೀಯವಾಗಿ ಕೆಳಮಟ್ಟದಲ್ಲಿದ್ದರೆ, ಅದು ನೇರವಾಗಿ ರಾಷ್ಟ್ರದ ಅಭಿವೃದ್ಧಿಯನ್ನು ನಿರ್ಣಯಿಸುವ ಮಾನವಾಭಿವೃದ್ಧಿಗೆ ಧಕ್ಕೆ ತರುತ್ತದೆ. ಒಂದು ಗಮನಾರ್ಹವಾದ ಸಂಗತಿ ಎಂದರೆ, ಅತಿ ಹೆಚ್ಚು ಜನಸಂಖ್ಯೆಯನ್ನು ಹೊಂದಿರುವ ಬಿಹಾರ್, ರಾಜಾಸ್ಥಾನ ಮತ್ತು ಮಧ್ಯ ಪ್ರದೇಶದ ಮಹಿಳಾ ಶಿಕ್ಷಣದ ವಿಷಯಕ್ಕೆ ಬಂದಾಗ, ಅವುಗಳು ಅತ್ಯಂತ ಹಿಂದುಳಿದ ರಾಜ್ಯಗಳ ಗುಂಪಿಗೆ ಸೇರುತ್ತವೆ. ವ್ಯಾಪಕ ಜನಸಂಖ್ಯೆಯುಳ್ಳ ರಾಜ್ಯಗಳು ಎಂಬ ಕಾರಣದಿಂದಲೇ ರಾಷ್ಟ್ರೀಯ ಸರಾಸರಿಯಲ್ಲಿ ಇವುಗಳ ಪಾತ್ರ ಹೆಚ್ಚಿದ್ದರೂ, ಈ ಸರಾಸರಿ ಮಟ್ಟವನ್ನು ಕಾಯ್ದುಕೊಳ್ಳಲು ಇವುಗಳಿಂದ ಸಂದುವ ಕಾಣಿಕೆ ಮಾತ್ರ ಅತ್ಯಂತ ಕಡಿಮೆ. ಇದರ ಫಲವಾಗಿ, ರಾಷ್ಟ್ರೀಯ ಸರಾಸರಿಯು ಮೇಲ್ಮಟ್ಟದಿಂದ ವಂಚಿತವಾಗಿದೆ.

ಮಹಿಳೆಯರ ಶಿಕ್ಷಣವನ್ನು ಹೆಚ್ಚಿಸುವ ನಿಟ್ಟಿನಲ್ಲಿ ಕೆಲವು ಮುಖ್ಯ ಕ್ರಮಗಳನ್ನು ಕೈಗೊಳ್ಳಲಾಗಿದೆ. ನವೋದಯ ವಿದ್ಯಾಲಯಗಳಲ್ಲಿ ಒಟ್ಟು ವಿದ್ಯಾರ್ಥಿ ಸಂಖ್ಯೆಯ ಮೂರನೆಯ ಒಂದು ಭಾಗವನ್ನು (1/3) ವಿದ್ಯಾರ್ಥಿನಿಯರಿಗೇ ಮೀಸಲಿಡಲಾಗಿದೆ. ಈ ವಿಷಯದಲ್ಲಿ ಸಾಧನೆಯೂ ಗಮನಾರ್ಹವಾಗಿದ್ದು, ಕಾಲಕಳೆದಂತೆ ರಾಷ್ಟ್ರಾಭಿವೃದ್ಧಿಯಲ್ಲಿ ಶಿಕ್ಷಿತ ಮಹಿಳೆಯ ಪಾತ್ರವನ್ನು ಹೆಚ್ಚಿಸಲು ಇದು ಬಲವಾದ ತಳಪಾಯವಷ್ಟೇ ಅಲ್ಲದೆ ಮುಂದಿನ ಜನಾಂಗಕ್ಕೂ ಇದೊಂದು ಮಾದರಿ ಆಗಲಿದೆ. ಈ ವಿಧಾನದಿಂದ ಮಹಿಳಾ ಸಾಕ್ಷರತೆ ಮತ್ತು ಶಿಕ್ಷಣ ನಿಧಾನವಾಗಿ ಸ್ವಸಾಮರ್ಥ್ಯವನ್ನು ಪಡೆಯುತ್ತದೆ.

ನೂತನ ಶಿಕ್ಷಣ ನೀತಿಯು ಕೆಳವರ್ಗದ ಜನರನ್ನು ದೃಷ್ಟಿಯಲ್ಲಿಟ್ಟುಕೊಂಡು ಸಂಪೂರ್ಣ ಸಾಕ್ಷರತಾ ಚಳುವಳಿಯನ್ನು ರೂಪಿಸಿದೆ. ಈ ಚಳುವಳಿಯ ಗಮನಾರ್ಹ ಪರಿಣಾಮವೆಂದರೆ, ಶೇಕಡಾ 60 ರಷ್ಟು ಮಹಿಳೆಯರು ಸಾಕ್ಷರತಾ ಚಳುವಳಿಯಲ್ಲಿ ನೋಂದಾವಣೆ ಹೊಂದಿದ್ದಾರೆ. ಇದು ಮಹಿಳೆಯರಲ್ಲಿ ಹೆಚ್ಚಿನ ಅರಿವಿಗೆ ದಾರಿಯಾಗುವುದಲ್ಲದೆ, ನೂತನ ರಾಜ್ಯಾಂಗ ತಿದ್ದುಪಡಿ ಸಾಧಿಸಬೇಕೆಂದಿರುವ 'ಮಹಿಳೆಯರ ಕೈಯಲ್ಲಿ ಅಧಿಕಾರ ಸೂತ್ರ'ದ ಕನಸನ್ನು ನನಸಾಗಿಸುವುದರಲ್ಲೂ ದಾಪುಗಾಲು ಆಗಲಿದೆ.

ಉನ್ನತ ಶಿಕ್ಷಣದಲ್ಲಿ ತಾತ್ವಿಕವಾಗಿ ಮಹಿಳಾ ಸಾಕ್ಷರತಾ ಯೋಜನೆಯು ಸಾಧಿಸಿರುವ ಪ್ರಗತಿ ಬಹುಶಃ ಇನ್ನಾವ ಕ್ಷೇತ್ರದಲ್ಲೂ ಸಾಧಿತವಾಗಿಲ್ಲ. 1950-51ರಲ್ಲಿ ಉನ್ನತ ಶಿಕ್ಷಣ ಕೇಂದ್ರಗಳಲ್ಲಿ ಮಹಿಳೆಯ ಒಟ್ಟು ನೋಂದಾವಣೆ ಸಂಖ್ಯೆ ಕೇವಲ 40,000 ಇತ್ತು. 4 ದಶಕಗಳಲ್ಲಿ ಇದು ಶೇಕಡಾ 4000ಕ್ಕೆ ಏರುವುದರ ಮೂಲಕ, 15.90 ಲಕ್ಷಗಳ ಗಡಿಯನ್ನು ಮುಟ್ಟಿದೆ. ಸ್ವಾತಂತ್ರ್ಯೋತ್ತರದ ಕೆಲವು ದಶಕಗಳಲ್ಲಿ ಉನ್ನತ ಶಿಕ್ಷಣಕ್ಕೆ ಹೆಚ್ಚು ಒತ್ತು ದೊರಕಿದ ಕಾರಣ, ಮಹಿಳೆಯರ ಒಟ್ಟು ನೋಂದಾವಣಿಯು 20% ರಿಂದ 33% ರಷ್ಟು ಈ ದಶಕಗಳಲ್ಲಿಯೇ ಸಾಧಿಸಲ್ಪಟ್ಟಿದೆ.

★ ★ ★ ★

ದೆಹಲಿಯ 'ಯೂನಿವರ್ಸಿಟಿ ನ್ಯೂಸ್' ಪತ್ರಿಕೆಯಲ್ಲಿ ಶ್ರೀಮತಿ ನೀರು ಮಿಶ್ರ ಅವರು ಬರೆದ Women's Education, Human Development and NEP ಎಂಬ ಲೇಖನದ ಅನುವಾದ ಈ ಲೇಖನ. ಈ ಲೇಖನವನ್ನು ಶ್ರೀಮತಿ ಬಿ.ಯು. ಸುಮ 'ಅಚಲ'ಕ್ಕಾಗಿ ಅನುವಾದಿಸಿಕೊಟ್ಟಿದ್ದಾರೆ.

## ಹೊಸದಿಕ್ಕಿನ ಹುಡುಕಾಟದ ನಿರ್ದೇಶಕಿಯರು

- ಮುರಳೀಧರ ಖಜಾನೆ

ಹೆಚ್ಚೂ ಕಡಿಮೆ ಒಂದು ಶತಮಾನದ ಅಂಚಿನಲ್ಲಿರುವ ಭಾರತೀಯ ಚಿತ್ರರಂಗದ ಇತಿಹಾಸದೊಳಗೊಂದು ಇಣುಕು ನೋಟ ಹರಿಸಿದರೆ ಇದು ಪುರುಷಪ್ರಧಾನವಾಗಿತ್ತೆಂದು ಅನ್ನಿಸುತ್ತದೆ. ನಟಿಯರ ಪಾತ್ರಕ್ಕಷ್ಟೇ ಮಹಿಳೆಯರು ಸೀಮಿತವಾಗಿದ್ದು, ತಾಂತ್ರಿಕ ಕ್ಷೇತ್ರವಾದ ನಿರ್ದೇಶನವಾಗಲಿ, ಛಾಯಾಗ್ರಹಣವಾಗಲಿ, ಸಂಕಲನವಾಗಲಿ ಅವರ ಪಾಲಿಗೆ ಲಭ್ಯವಾಗಿರಲಿಲ್ಲ.

ನನಗೆ ತಿಳಿದಿರುವ ಮಟ್ಟಿಗೆ 1966ರಲ್ಲಿ ಅರುಂಧತಿ ಮುಖರ್ಜಿ 'ಚೂಟಿ' ನಿರ್ಮಿಸುವವರೆಗೆ ನಿರ್ದೇಶನ ಕ್ಷೇತ್ರಕ್ಕೆ ಮಹಿಳೆಯೊಬ್ಬರ ಪಾದಾರ್ಪಣವಾಗಿರಲೇ ಇಲ್ಲ. 'ಚೂಟಿ'ಯ ಬೆನ್ನ ಹಿಂದೆಯೆ ಅರುಂಧತಿ ಮುಖರ್ಜಿ 'ಮೇಘ ಓ ರೌದ್ರ' ನಿರ್ಮಿಸಿದರು. ಅರುಂಧತಿ ಮುಖರ್ಜಿಯ ನಂತರ ಹದಿಮೂರು ವರ್ಷಗಳ ಕಾಲ ಯಾವುದೇ ಮಹಿಳಾ ನಿರ್ದೇಶಕಿಯೂ ಚಿತ್ರನಿರ್ದೇಶಿಸುವ ಧೈರ್ಯ ಮಾಡಲೇ ಇಲ್ಲ.

ಇಂಥ ಸಂದರ್ಭದಲ್ಲಿ ಮಹಿಳಾ ನಿರ್ದೇಶಕಿಯಾಗಿ ಚಿತ್ರರಂಗಕ್ಕೆ ಕಾಲಿಟ್ಟವರು ಸಾಯಿ ಪರಾಂಜಪೆ. 1979ರಲ್ಲಿ 'ಸ್ಪರ್ಶ್' ಚಿತ್ರ ನಿರ್ದೇಶಿಸುವ ಮೂಲಕ ಸಾಯಿ ಪರಾಂಜಪೆ ಅರುಂಧತಿ ಮುಖರ್ಜಿ ಖಾಲಿ ಮಾಡಿದ ಸ್ಥಾನವನ್ನು ತುಂಬಿದರೆಂದರೆ ತಪ್ಪಾಗಲಾರದು.



ಸಾಯಿ ಪರಾಂಜಪೆ ಒಮ್ಮೆಗೆ ಪೂರ್ಣಪ್ರಮಾಣದ ಚಿತ್ರ ನಿರ್ದೇಶನಕ್ಕೆ ಧುಮುಕಿದವರೇನಲ್ಲ. ಅಂದಿನ ಮಕ್ಕಳ ಚಲನಚಿತ್ರ ಸಮಾಜ ಹಾಗೂ ದೂರದರ್ಶನಕ್ಕೆ ಚಿಕ್ಕ ಪುಟ್ಟ ಚಿತ್ರಗಳನ್ನು ನಿರ್ದೇಶಿಸಿ ನಂತರ 'ಸ್ಪರ್ಶ್' ಮೂಲಕ ಪುರುಷಪ್ರಧಾನವಾದ ನಿರ್ದೇಶನದ ಕ್ಷೇತ್ರದಲ್ಲಿ ತಮ್ಮದೇ ಆದ ಸ್ಥಾನವೊಂದನ್ನು ನಿರ್ಮಿಸಿಕೊಂಡರು.

ಕುರುಡರ ಶಾಲೆಯ ಅಂಧ ಪ್ರಾಂಶುಪಾಲ ಅನಿರುಧ್ (ನಾಸಿರುದ್ದೀನ್ ಷಾ) ಹಾಗೂ ಯುವ ವಿಧವೆ ಕವಿತಾ (ಶಬಾನಾ ಆಜ್ಮಿ) ಇಬ್ಬರ ಸುತ್ತಲಿನ ನವಿರು ಪ್ರೇಮವನ್ನು ಕುರಿತಾದ ಚಿತ್ರ 'ಸ್ಪರ್ಶ್'. ಇದರ ಸಂಪೂರ್ಣ ಒತ್ತು ಮನುಷ್ಯನ ಚಂಚಲ ಸ್ವಭಾವದ ಮೇಲೆಯೇ. ಈ ಚಿತ್ರದಲ್ಲಿ ಅಪ್ರತಿಮ ಆತ್ಮವಿಶ್ವಾಸದ ಅಂಧ ಶಿಕ್ಷಕನಾಗಿ ನಾಸಿರುದ್ದೀನ್ ಷಾ ನೀಡಿರುವ ಅಭಿನಯ ಎಷ್ಟು ಪ್ರಬುದ್ಧವೋ ಅಷ್ಟೇ ತಾಳ್ಮೆಯ, ದಿಟ್ಟನಿಲುವಿನ ಪ್ರಬುದ್ಧ ಅಭಿನಯ ಶಬಾನಾರದು ಎನ್ನುವುದು ನಿರ್ವಿವಾದದ ಸಂಗತಿ. ಈ ಚಿತ್ರವನ್ನು ನಿರ್ದೇಶಿಸುವಾಗ ಸಾಯಿ ಪರಾಂಜಪೆ ಎಷ್ಟು ಎಚ್ಚರವಹಿಸಿದ್ದರೆಂದರೆ ಷಾ ಅವರ ಅಂಧತ್ವದ ಜೊತೆಗೆ ಅವರ ಆತ್ಮವಿಶ್ವಾಸ ಕೂಡ ಪ್ರೇಕ್ಷಕನು ಆಳಕ್ಕಿಳಿದು ಚಿಂತಿಸುವಂತೆ ಮಾಡಿತು. ಚಿತ್ರದ ಚಿತ್ರಕಥೆ ಹಾಗೂ ಸಂಭಾಷಣೆ ಎರಡರ ಹೊಣೆಯನ್ನೂ ಹೊತ್ತಿದ್ದ ಸಾಯಿ, ಅದರಲ್ಲೂ ತಮ್ಮ ಸಂಪೂರ್ಣ ಪರಿಣತಿ ತೋರಿದ್ದರು. ಸಂಯಮದ ಹಾಸ್ಯಪ್ರಜ್ಞೆ, ಈ ಚಿತ್ರಕ್ಕೆ ಹೊಸದೇ ಆದ ಆಯಾಮವೊಂದನ್ನು ತಂದುಕೊಟ್ಟಿತು. ಆದರೆ ಸಾಯಿ ಪರಾಂಜಪೆ ಅವರ ಮೊದಲ ಚಿತ್ರದಲ್ಲಿ ಮಹಿಳಾಪರವಾದ ಯಾವುದೇ ಧೋರಣೆ-ಘೋಷಣೆ ಇಲ್ಲದಿರುವುದು ಕೆಲವರನ್ನು ಹುಬ್ಬೇರಿಸುವಂತೆ ಮಾಡಿತು. ಅದಕ್ಕೆ ಸಾಯಿ ನೀಡಿದ ಉತ್ತರ ''ನಾನು ಚಿತ್ರವೊಂದನ್ನು ನಿರ್ದೇಶಿಸಿದ್ದೇನೆಯೇ ಹೊರತು ಯಾವುದೇ ವಾದವನ್ನು ಮಂಡಿಸಲಿಕ್ಕಲ್ಲ'' ಎನ್ನುವುದಾಗಿತ್ತು.

ಇದಾದನಂತರ ಸಾಯಿ ಪರಾಂಜಪೆ ನಿರ್ಮಿಸಿದ ಚಿತ್ರ 'ಚಶ್ಮೆಬುದೂರ್'. ಈ ಚಿತ್ರ ಹಾಗೂ ಅಪರ್ಣಾ ಸೇನ್‌ರ '36 ಚೌರಂಗೀ ಲೇನ್' ಎರಡೂ ಒಟ್ಟಿಗೆ 1981ರಲ್ಲಿ ತೆರೆಕಂಡವು.

ಈ ಎರಡು ಚಿತ್ರಗಳೂ ಕೂಡ ವಸ್ತುವಿನ ನೇಯ್ಗೆ, ಅದರ ಅಂತರಾಳದ ಧ್ವನಿ, ನಿರ್ವಹಣೆಯ ರೀತಿಯಿಂದ ಭಾರತೀಯ ಚಿತ್ರರಂಗದ ಇತಿಹಾಸದಲ್ಲಿ ಹೊಸ ಅಧ್ಯಾಯವನ್ನು ತೆರೆದವು.

ಅಪರ್ಣಾ ಸೇನ್ '36 ಚೌರಂಗೀ ಲೇನ್'ನಲ್ಲಿ ಆರಿಸಿಕೊಂಡ ವಸ್ತು ಹೆಚ್ಚೂ ಕಡಿಮೆ ಕಲಾತ್ಮಕ ಚಿತ್ರಕ್ಕೆ ಹೊಂದಾಣಿಕೆ ಆಗುವಂಥಾದ್ದು. ಕಥೆಯ ಕಾಲ ಸ್ವಾತಂತ್ರ್ಯಾನಂತರದ ತಕ್ಷಣದ ಕಾಲ, ಆಂಗ್ಲೋ-ಇಂಡಿಯನ್‌ರ ಏಕಾಂಗೀತನ, ಅದನ್ನು ನಿಗ್ರಹಿಸಲು ಆಕೆ ನಡೆಸುವ ನಿಷ್ಫಲ ಪ್ರಯತ್ನ. ಅದರ ದುರ್ಲಾಭ

ಪಡೆಯುವ ಯುವ ಜೋಡಿ ..... ಸುತ್ತ ಹೆಣೆದ ಕಥೆಯನ್ನು ಅಪರ್ಣಾ ಸೇನ್ ನಿರ್ವಹಿಸಿದ ರೀತಿಗೆ ಅಂದಿನ ಕಲಾತ್ಮಕ ನಿರ್ದೇಶಕರೂ ಕೂಡ ಬೆಚ್ಚಿದರು. ಜೊತೆಗೇ ಮೆಚ್ಚಿದರು. ಆಂಗ್ಲೋ-ಇಂಡಿಯನ್ ಮಹಿಳೆಯಾಗಿ ಜೆನ್ನಿಫರ್ ಕೆಂಡಾಲ್ ನೀಡಿದ ಅಭಿನಯ ಕೂಡ ಅವಿಸ್ಮರಣೀಯವಾದುದು.

ಆದರೆ 'ಚಷ್ಮೆ ಬುದೂರ್' ಚಿತ್ರ '36 ಚೌರಂಗೀ ಲೇನ್' ಗಿಂತ ತೀರಾ ಭಿನ್ನವಾದುದು. ಒಂದರ್ಥದಲ್ಲಿ ಈ ಚಿತ್ರ 80ರ ದಶಕದ ಕಮರ್ಷಿಯಲ್ ಚಿತ್ರವನ್ನು ಲೇವಡಿ ಮಾಡುವಂಥಹುದು. ಹೆಣ್ಣೊಬ್ಬಳ ಪ್ರೀತಿಗಾಗಿ ಗ್ಯಾಂಗ್‌ಸ್ಟರ್‌ಗಳೊಂದಿಗೆ ಹೊಡೆದಾಡುವುದು, ಪ್ರೀತಿಗಾಗಿ ಹಾಡುವುದು ಎಲ್ಲವೂ ಒಂದು ದೃಷ್ಟಿಯಿಂದ ಕಮರ್ಷಿಯಲ್ ಚಿತ್ರವನ್ನು ಲೇವಡಿ ಮಾಡುವಂಥದ್ದು. ಆದರೆ ಈ ಚಿತ್ರದ ಸಮಸ್ಯೆಯೆಂದರೆ ಈ ಚಿತ್ರದಲ್ಲಿ ಲೇವಡಿಯನ್ನು ಪ್ರೇಕ್ಷಕರು ಅರ್ಥಮಾಡಿಕೊಳ್ಳದೆ ನೇರವಾಗಿ ತೀವ್ರವಾಗಿ ಸ್ವೀಕರಿಸಿದ್ದು. ಇದು ನಿಜಕ್ಕೂ ವಿಪರ್ಯಾಸ.

ಸಾಯಿ ಪರಾಂಜಪೆ 1982ರಲ್ಲೂ ಚಿತ್ರವೊಂದನ್ನು ನಿರ್ಮಿಸುವುದರ ಮೂಲಕ ತಮ್ಮ ಇರುವಿಕೆಯನ್ನು ಸ್ಥಿರಪಡಿಸಿದರು. ಈ ವರ್ಷ ಅವರು ನಿರ್ದೇಶಿಸಿದ ಚಿತ್ರ 'ಕಥಾ'.

ಈ ಚಿತ್ರದಲ್ಲಿ ಸಾಯಿ ಪರಾಂಜಪೆ ಮಧ್ಯಮ ವರ್ಗದ ಧೋರಣೆಗಳನ್ನು ಹಾಸ್ಯದ ಮೂಲಕ ತೆರೆದಿಟ್ಟರು. ಮಧ್ಯಮ ವರ್ಗದ ಕೊಳಕುತನ ಸಣ್ಣತನಗಳನ್ನು ಕುರಿತು ಸಾಯಿ ಪರಾಂಜಪೆ ಮಾಡಿದ ಲೇವಡಿ ಸಾಮಾನ್ಯ ಪ್ರೇಕ್ಷಕನನ್ನು ತಲುಪದೆ, ಅದು ಕೇವಲ ಲಘು ಮನರಂಜನೆಯ ಚಿತ್ರದ ಮಟ್ಟಿಗೆ ನಿಂತುಬಿಟ್ಟದ್ದು ಮತ್ತೊಂದು ವಿಪರ್ಯಾಸ. ಆದರೆ ವಿಮರ್ಶಕರು ಈ ಚುರುಕು ವ್ಯಂಗ್ಯವನ್ನು ಗುರುತಿಸಿದರು, ಮೆಚ್ಚಿಕೊಂಡರು.

ಇದೇ ವರ್ಷದ ಕನ್ನಡ ಚಿತ್ರರಂಗದ ಮೊದಲ ಮಹಿಳಾ ನಿರ್ದೇಶಕಿ ಪ್ರೇಮಾ ಕಾರಂತ್ 'ಫಣಿಯಮ್ಮ' ಚಿತ್ರದ ಮೂಲಕ ತಮ್ಮ ರಂಗಭೂಮಿ ಪ್ರತಿಭೆಯನ್ನು ಒರೆಗಿಟ್ಟು ನೋಡಿದರು.

ರೂಢಿಗತ ಸಂಪ್ರದಾಯಗಳ ಸಂಕೋಲೆಗೆ ಸಿಕ್ಕಿಕೊಂಡ ಬಾಲವಿಧವೆಯ ಸುತ್ತ ಹೆಣೆದ ಕಥೆಯನ್ನು ಪ್ರೇಮಾ ಕಾರಂತ್ ಸಮರ್ಥವಾಗಿಯೇ ನಿರ್ವಹಿಸಿದರು. ಬಾಲವಿಧವೆಯಾದ ಫಣಿಯಮ್ಮ ಕಾಲಕಳೆದಂತೆ ಮಾಗಿ ತನಗಾದ ಅನ್ಯಾಯ ಇನ್ನೊಬ್ಬ ಯುವ ವಿಧವೆಗೆ ಆಗದಂತೆ ಆಕೆಗೆ ಬೆಂಬಲವಾಗಿ ನಿಲ್ಲುವ ಮೂಲಕ ತೋರುವ ಧೈರ್ಯ, ಸಂಕೋಲೆ ನಿಧಾನವಾಗಿ ಕಳಚುತ್ತಿರುವ ಧ್ವನಿಯನ್ನು ನೀಡಿತು.

ಇದರ ಮುಂದಿನ ವರ್ಷ ಮತ್ತೊಂದು ರಂಗಭೂಮಿಯ ಪ್ರತಿಭೆ ಚಿತ್ರರಂಗವನ್ನು ಅಪ್ಪಿಕೊಂಡಿತು. 'ಸ್ಮೃತಿ ಚಿತ್ರೆ' ಮೂಲಕ ವಿಜಯ್ ಮೆಹ್ತಾ ಚಿತ್ರರಂಗಕ್ಕೆ ಬಂದರು.

ಮರಾಠಿ ಮಹಿಳಾ ಲೇಖಕಿ ಲಕ್ಷ್ಮೀಬಾಯಿ ತಿಲಕ್ ಅವರ ಬದುಕನ್ನು ಕುರಿತಾದ ಚಿತ್ರ ಇದು. 1880ರಿಂದ 1900ರವರೆಗಿನ ಲಕ್ಷ್ಮೀಬಾಯಿ ಹಾಗೂ ಆಕೆಯ ಪತಿಯ ಬದುಕಿನ ಇಪ್ಪತ್ತು ವರ್ಷಗಳ ಚಿತ್ರಣ ಇದು. ಇದರಲ್ಲಿ ಅಂದಿನ ಸಮಾಜದ ಕ್ರೌರ್ಯದಿಂದ ನರಳುವ ಆತ್ಮಗಳ ಧ್ವನಿ ಕೂಡ ಕೇಳಿಸುತ್ತದೆ ಎಂದು ಕೆಲವು ವಿಮರ್ಶಕರು ಅಭಿಪ್ರಾಯಪಟ್ಟಿದ್ದೂ ಉಂಟು.

ಹಾಗೆ ನೋಡಿದರೆ 'ಫಣಿಯಮ್ಮ' ಹಾಗೂ 'ಸ್ಮೃತಿ ಚಿತ್ರೆ' ಚಿತ್ರಗಳೆರಡೂ ಮಹಿಳಾಪರ ಧ್ವನಿಯ ಚಿತ್ರಗಳಲ್ಲದಿದ್ದರೂ, ಮಹಿಳೆಯ ಬವಣೆಯ ಅಂತರಂಗದ ಧ್ವನಿಗೆ ರೂಪು ಕೊಡುವಂಥವು.

ಒಂದು ವರ್ಷದ ಬಿಡುವಿನ ನಂತರ ಅಪರ್ಣಾ ಸೇನ್ ಅವರ 'ಪರೋಮ' ಹಾಗೂ ಕಲ್ಪನಾ ಲಾಜ್ಮಿ ಅವರ ಮೊದಲ ಚಿತ್ರ 'ಎಕ್ ಪಲ್' ಎರಡೂ ತೆರೆಕಂಡವು. ಇದರ ಜೊತೆಗೇ ವಿಜಯ್ ಮೆಹ್ತಾರ ಮತ್ತೊಂದು ಚಿತ್ರ 'ರಾವ್ ಸಾಹೇಬ್' ಕೂಡ ತೆರೆಕಂಡಿತು.

'ಪರೋಮ' ಒಂದು ಅರ್ಥದಲ್ಲಿ ತನ್ನತನಕ್ಕಾಗಿ ಹುಡುಕಾಡುವ ಹೆಣ್ಣೊಬ್ಬಳ ಸುತ್ತ ಹೆಣೆದ ಚಿತ್ರ. ಅತ್ಯಂತ ಗಟ್ಟಿನೆಲೆಯ ಈ ಚಿತ್ರಕಥೆ ರಚಿಸಿ ಚಿತ್ರ ನಿರ್ಮಿಸಿದ ಅಪರ್ಣಾ ಸೇನ್ ಮಹಿಳಾವಿಮೋಚನೆಯ ಹೊಸ ಧ್ವನಿಯನ್ನೇ ಈ ಚಿತ್ರದ ಮೂಲಕ ಹೊರಡಿಸಿದರು. ತಾಯಾಗಿ, ಹೆಂಡತಿಯಾಗಿ, ಮಗಳಾಗಿ ಕೇವಲ ಇನ್ನೊಬ್ಬರ ಸಲುವಾಗಿಯೇ ದುಡಿಯುವ ಹೆಣ್ಣು ಇಲ್ಲಿ ಅಂತಿಮವಾಗಿ ತನ್ನತನವನ್ನು ಕಂಡುಕೊಳ್ಳುವುದು ಅವಳ ಬಯಕೆಗಳಿಗೆಲ್ಲ ರೂಪ ನೀಡಿ, ಹೊಸ ಕನಸುಗಳನ್ನು ಚಿಗುರಿಸಿ, ಹೊಸ ಬದುಕಿನತ್ತ ದೃಷ್ಟಿನೆಟ್ಟು ನೋಡುವಂತೆ ಮಾಡುವ ಆಕೆಯ ಪ್ರಿಯಕರನಲ್ಲಿ ತಾನೇ ಸೃಷ್ಟಿಸಿಕೊಂಡ ಬಲೆಯಲ್ಲಿ ಸಿಕ್ಕು ನರಳುತ್ತ ಅಂತಿಮವಾಗಿ ಬಿಡುಗಡೆ ಪಡೆಯುವ ಹಕ್ಕಿಯಂಥ ಪಾತ್ರವನ್ನು ರಾಖಿ ನಿರ್ವಹಿಸಿದ ರೀತಿ ಅನನ್ಯ. ಆಕೆಯ ಕನಸುಗಳನ್ನು ಚಿಗುರಿಸುವ ಪ್ರಿಯಕರನಾಗಿ ಮುಕುಲ್‌ಶರ್ಮ ಕೂಡ ತಮ್ಮ ಅಭಿನಯದಿಂದ ಮೆಚ್ಚಿಗೆ ಗಳಿಸುತ್ತಾರೆ.

ಆದರೆ ಇದೇ ರೀತಿ ವಿವಾಹೇತರ ಸಂಬಂಧವನ್ನೂ ಕುರಿತು ವಿಶ್ಲೇಷಿಸುವ 'ಎಕ್ ಪಲ್' ನಿರ್ದಿಷ್ಟ ದೃಷ್ಟಿಕೋನದ ಕೊರತೆಯಿಂದ ನರಳುತ್ತದೆ. ಇದಕ್ಕೆ ನಿರ್ದೇಶಕಿಯ ದ್ವಂದ್ವವೂ ಅಲ್ಪ ಸ್ವಲ್ಪ ಕಾರಣ ಎನ್ನದೆ ಬೇರೆ ದಾರಿ ಇಲ್ಲ. ವಿಜಯ್ ಮೆಹ್ತಾರ 'ರಾವ್ ಸಾಹೇಬ್' ಮತ್ತೊಂದು ರೀತಿಯಲ್ಲಿ 'ಫಣಿಯಮ್ಮ' ನನ್ನೇ ನೆನಪಿಸುತ್ತದೆ. ಮಧ್ಯಮ ವಯಸ್ಸಿನ ವಿಧವೆ 'ಮೌಸಿ' ಯುವ ವಿಧವೆಯೊಬ್ಬಳ ಬಂಡಾಯಕ್ಕೆ ನೀಡುವ ನೆರವು ಇಲ್ಲಿ ಗಮನಾರ್ಹವಾಗುತ್ತದೆ. ಮೌಸಿ ಹೆಚ್ಚೂಕಡಿಮೆ ಫಣಿಯಮ್ಮನನ್ನೇ ನೆನಪಿಸುತ್ತಾಳೆ. ಆದರೂ 'ರಾವ್ ಸಾಹೇಬ್' ಕೂಡ 'ಎಕ್ ಪಲ್' ನಂತೆಯೇ ನಿರ್ದಿಷ್ಟ ಗುರಿಯಿಲ್ಲದೆ ನರಳುತ್ತದೆ. ಏಕೆಂದರೆ ವಿಜಯ್ ಮೆಹ್ತಾ ವಸ್ತುವಿಗೆ ಕೊಡಬೇಕಾದ ಒತ್ತನ್ನು ಕಾಲದ

ಅಥೆಂಟಿಸಿಟಿಯನ್ನು ಸ್ಥಾಪಿಸುವುದರತ್ತ ಹರಿಸಿದ್ದಾರೆ. ವಿಜಯ್ ಮೆಹ್ತಾ ತಮ್ಮ ಎಲ್ಲ ಶಕ್ತಿಯನ್ನೂ ಆಧುನಿಕತೆಗೆ ಒಲಿಯುವ ಮೌಸಿಯ ಮೇಲೆ ಕೇಂದ್ರೀಕರಿಸಿರುವುದರಿಂದ ಯುವ ವಿಧವೆ (ತನ್ವಿ ಆಜ್ಮಿ)ಯ ಪಾತ್ರ ಪೇಲವವಾದಂತೆ ತೋರುತ್ತದೆ.

1987ರಲ್ಲಿ ವಿಜಯ್ ಮೆಹ್ತಾ ತಾವು ನಿರ್ದೇಶಿಸಿದ 'ಪೆಸ್ತೋನ್‌ಜೀ' ಚಿತ್ರದಲ್ಲೂ 'ರಾವ್ ಸಾಹೇಬ್' ಚಿತ್ರದಲ್ಲಿ ಮಾಡಿದ ತಪ್ಪನ್ನೇ ಪುನರಾವರ್ತಿಸಿದರೂ ಅತ್ಯುತ್ತಮ ಚಿತ್ರವೊಂದನ್ನು ನೀಡುವಲ್ಲಿ ಯಶಸ್ವಿಯಾದರು ಎಂಬುದನ್ನು ಒಪ್ಪಿಕೊಳ್ಳಲೇ ಬೇಕಾಗುತ್ತದೆ.



ಪಾರ್ಸಿ ಕುಟುಂಬದ ನೋವು ನಲಿವುಗಳನ್ನು ಚಿತ್ರಿಸುವಾಗ ವಿಜಯ್ ಮೆಹ್ತಾ ಮತ್ತೆ ಕಾಲದ ಅಥೆಂಟಿಸಿಟಿಯನ್ನು ಸ್ಥಾಪಿಸುವ ಭರದಲ್ಲಿ ಪೆಸ್ತೋನ್‌ಜೀಯ ಪಾತ್ರಗಳನ್ನು ಪೇಲವವಾಗಿಸಿ ಬಿಟ್ಟಿದ್ದಾರೆ. ಪರಂಪರೆಯ ಅಧಿಕೃತತೆಯನ್ನು ಹಿಡಿದಿಡುವ ಪ್ರಬಲ ಬಯಕೆ ಪಾತ್ರಗಳನ್ನು ನಿರ್ಜೀವಗೊಳಿಸಿಬಿಟ್ಟಿದೆ. ಆದರೂ ಪಾರ್ಸಿ ಕುಟುಂಬವು ಸ್ಥಿತ್ಯಂತರ ಕಾಲದಲ್ಲಿ ಎದುರಿಸುವ ಹತಾಶೆ ಏಕಾಕಿತನಗಳನ್ನು ಹಿಡಿದಿಡುವಲ್ಲಿ ಚಿತ್ರ ಯಶಸ್ವಿಯಾಗಿದೆ.

1989ರಲ್ಲಿ ಅಪರ್ಣಾ ಸೇನ್ ಮತ್ತೆ 'ಸತಿ' ಚಿತ್ರವನ್ನು ನಿರ್ದೇಶಿಸಿದರು. ಈ ಚಿತ್ರ ಕಲಾತ್ಮಕವಾಗಿ ಕೂಡ ಹೇಳಿಕೊಳ್ಳುವಂಥ ಯಶಸ್ಸನ್ನೇನೂ ಗಳಿಸದಿದ್ದರೂ 'ಸತಿ'ಗೆ ಬಲಿಯಾದ ಹೆಣ್ಣಾಗಿ ಶಬಾನಾ ಆಜ್ಮಿ ನೀಡಿದ ಅಭಿನಯ ಅಪರೂಪದ್ದು. ('ಸತಿ'ಯನ್ನು ಪೇಲವ ಎಂದು ವಿಮರ್ಶಕರು ಪರಿಗಣಿಸಲು ಮತ್ತೊಂದು ಕಾರಣ ಕೂಡ ಕೊಡಬಹುದು. ಇದಕ್ಕೆ ಮುನ್ನ 1987ರಲ್ಲಿ ಗೌತಮ್ ಘೋಷ್ ಇದೇ ವಸ್ತುವನ್ನಾಧರಿಸಿ 'ಅಂತರ್ಜಲಿ ಯಾತ್ರಾ' ನಿರ್ಮಿಸಿದ್ದು ಇದರ ಪ್ರಭಾವದಿಂದ ಹೊರಬರಲಾಗದೆ 'ಸತಿ'ಯನ್ನು ಪೇಲವ ಎಂದು ಪರಿಗಣಿಸಿರಲೂ ಸಾಕು.)

ಇದೇ ವರ್ಷ ಅಪರ್ಣಾ ಸೇನ್ 'ಪಿಕ್‌ನಿಕ್' ಎಂಬ ಮತ್ತೊಂದು ಚಿತ್ರ ನಿರ್ದೇಶಿಸಿದರು. ಮುಂದಿನ ವರ್ಷ ಸಾಯಿ ಪರಾಂಜಪೆ 'ದಿಶಾ' ನಿರ್ದೇಶಿಸಿದರು. ಆದರೆ ಈ ಚಿತ್ರಗಳಲ್ಲಿ ಅದೇಕೋ ಈ ನಿರ್ದೇಶಕಿಯರು ತಮ್ಮ ಹಳೆಯ ಚಿತ್ರಗಳಲ್ಲಿ ತೋರಿದ ಲವಲವಿಕೆಯನ್ನು ತೋರಲಿಲ್ಲ. (ಎಲ್ಲ ಚಿತ್ರಗಳನ್ನು ನಿರ್ದೇಶಕ, ನಿರ್ದೇಶಕಿಯರು ಸತತವಾಗಿ ಉತ್ತಮವಾಗೇ ಮಾಡಬೇಕೆಂಬ ಕಾನೂನು ಇಲ್ಲವಾದರೂ ಚಿತ್ರಗಳ ವಸ್ತು, ಅವು ಹೊರಡಿಸುವ ಧ್ವನಿ, ಹಾಗೂ ಅದನ್ನು ನಿರ್ವಹಿಸಿದ ರೀತಿ ಹೋಲಿಸಿ ನೋಡುವುದು ಅನಿವಾರ್ಯ.)

ಕಲ್ಪನಾ ಲಾಜ್ಮಿ 1992ರಲ್ಲಿ ನಿರ್ಮಿಸಿದ 'ರುಡಾಲಿ' ಪನೋರಮಾಗೆ ಆಯ್ಕೆಯಾದರೂ ಅದಕ್ಕೆ ಡಿಂಪಲ್ ಕಪಾಡಿಯಾರ ಕಾಸ್ಮೆಟಿಕ್ ನೋಟವೇ ಮುಳುವಾಯಿತು. ತನ್ನ ಸುತ್ತಲಿನ ಗಂಡಸರ ಕ್ರೌರ್ಯಕ್ಕೆ ಒಳಗಾಗಿ ಜೀವಿಸುವ ಏಕಾಂಗಿ ಹೆಣ್ಣಾಗಿ ಸತ್ತವರ ಮುಂದೆ ದುಃಖಿಸುವ ವೃತ್ತಿಪರ ರೋದಕಿ (ರುಡಾಲಿ) ಯಾಗುವ ವಸ್ತುವಿನ ಹಿನ್ನೆಲೆಯಲ್ಲಿ ಡಿಂಪಲ್‌ಗಿಂತ ಹೆಚ್ಚಾಗಿ ಹೃದಯಗೆಲ್ಲುವ ಪಾತ್ರ ರಾಖಿಯದೇ. ಈ ಚಿತ್ರ ತನ್ನ ವಸ್ತು ನಿರೂಪಣೆಗಿಂತ ಹೆಚ್ಚಾಗಿ ಗೆದ್ದಿರುವುದು ತನ್ನ ತಾಂತ್ರಿಕ ಮತ್ತು ನಿರ್ಮಾಣ ಮೌಲ್ಯ, ಮರುಭೂಮಿಯ ರೂಕ್ಷತೆ, ಅಥೆಂಟಿಸಿಟಿಗಾಗಿ ರೂಪಿಸಿದ ಸೆಟ್, ಹಾಗೂ ವಸ್ತ್ರವಿನ್ಯಾಸ, ಇವೆಲ್ಲಕ್ಕಿಂತ ಮಿಗಿಲಾಗಿ ಭೂಪೇನ್ ಹಜಾರಿಕಾರ ಸಂಗೀತದ ಮೂಲಕವೇ.

ಇದೇ ವರ್ಷ ಗೋಪಿ ದೇಸಾಯಿ ನಿರ್ಮಿಸಿದ ಮಕ್ಕಳ ಚಿತ್ರ 'ಮುಝ್ಸೆ ದೋಸ್ತಿ ಕರೋಗೇ' ಮಕ್ಕಳ ಚಿತ್ರವಾಗಿ ಸಾಕಷ್ಟು ಯಶಸ್ವಿ ಎನ್ನಿಸಿತು.

ಈ ನಡುವೆಯೇ ಅರುಣಾರಾಜೆ ಎಂಬ ಕನ್ನಡತಿ ನಿರ್ಮಿಸಿದ 'ರಿಹಾಯಿ' ಚಿತ್ರ ತನ್ನ ಮಿತಿಗಳ ನಡುವೆಯೂ ಉತ್ತಮವಾದ ಕಥೆಯೊಂದನ್ನು ಹೇಳುವಲ್ಲಿ ಯಶಸ್ವಿಯಾಯಿತು.

ನಗರ ಬದುಕು, ಗ್ರಾಮೀಣ ಬದುಕಿನ ಜೀವಂತಿಕೆಯನ್ನು ಹೇಗೆ ಇಡೀ ಯಾಗಿ ಕಬಳಿಸಿ ನೈತಿಕ ಅಧಃಪತನಕ್ಕೆ ಕಾರಣವಾಗುತ್ತದೆ ಎಂಬುದರ ಸ್ಪಷ್ಟಚಿತ್ರಣ ನೀಡುವ ಚಿತ್ರ 'ರಿಹಾಯಿ'.

ನೌಕರಿಯರಸಿ ಮುಂಬೈಗೆ ತೆರಳುವ ತನ್ನ ಗಂಡನನ್ನು ಧ್ಯಾನಿಸುವ ಹೆಣ್ಣು ಅಂತಿಮವಾಗಿ ತನ್ನ ಲೈಂಗಿಕ ಒತ್ತಡವನ್ನು ಹತ್ತಿಕ್ಕಿಕೊಳ್ಳಲಾಗದೆ ಅದಕ್ಕೆ ಪಕ್ಕಾಗುತ್ತಲೇ ನಿಜವಾದ ಹೆಣ್ಣಾಗುವ, ಅನಂತರ ಆ ಭ್ರೂಣವನ್ನು ತನ್ನದೆಂದು ರಕ್ಷಿಸುವ ಹಕ್ಕು ಪಡೆಯುವ ವಸ್ತುವಿನ ಸುತ್ತ ಕೇಂದ್ರೀಕರಿಸಿರುವ ಕಥೆ 'ರಿಹಾಯಿ'. ಅಂಥ ಹೆಣ್ಣಾಗಿ ಹೇಮಾಮಾಲಿನಿ ನೀಡಿರುವ ಅಭಿನಯ ಗಮನಾರ್ಹವಾದುದು.

ಇಷ್ಟೆಲ್ಲ ಮಹಿಳಾ ನಿರ್ದೇಶಕಿಯರು ಚಿತ್ರ ನಿರ್ಮಿಸಿದ್ದರೂ ಇಷ್ಟೂ ಚಿತ್ರಗಳ ಪೈಕಿ ಗಟ್ಟಿಕಾಳೆಂದು ಪರಿಗಣಿಸಬಹುದಾದ ಚಿತ್ರ ಅಪರ್ಣಾ ಸೇನ್‌ರ '36 ಚೌರಂಗೀ ಲೇನ್' ಎನ್ನುವುದು ಮಾತ್ರ ನಿರ್ವಿವಾದದ ಸಂಗತಿ ಎಂಬುದು ನನ್ನ ಅನಿಸಿಕೆ.

ಏಕೆಂದರೆ ಇನ್ನುಳಿದ ಚಿತ್ರಗಳಲ್ಲಿ ಸಾರ್ವತ್ರಿಕ ಮಾನವೀಯ ಮೌಲ್ಯಗಳನ್ನು ಹೆಣ್ಣೊಬ್ಬಳು ಸಂಪೂರ್ಣ ದರ್ಶನ ಮಾಡಿಸಲು ಸಾಧ್ಯವಾಗಿಲ್ಲ ಎನ್ನುವುದು ನನ್ನ ಅನಿಸಿಕೆ.

ಈ ವಾದ ಕೇವಲ ಮಹಿಳಾ ನಿರ್ದೇಶಕಿಯರ ಚಿತ್ರಕ್ಕಷ್ಟೇ ಸೀಮಿತವೇನಲ್ಲ. ಇದು ಪುರುಷ ನಿರ್ದೇಶಕರ ಚಿತ್ರಗಳನ್ನು ವಿಶ್ಲೇಷಣಾತ್ಮಕವಾಗಿ ನೋಡಿದಾಗ ಅನ್ವಯಿಸುವಂಥದ್ದು. ಇಲ್ಲಿ ಕೆಲವು ಮಹಿಳಾ ನಿರ್ದೇಶಕಿಯರ ಚಿತ್ರಗಳನ್ನಷ್ಟೇ ವಿಶ್ಲೇಷಿಸುವ ಜವಾಬ್ದಾರಿ ಕೈಗೆತ್ತಿಕೊಂಡಿರುವುದು ಈ ಅನಿಸಿಕೆಯನ್ನು ವ್ಯಕ್ತಪಡಿಸಿದ್ದೇನೆ.

**ದಕ್ಷಿಣ ಭಾರತದ ಚಿತ್ರರಂಗದಲ್ಲೊಂದು ಇಣುಕು ನೋಟ**

ಹಿಂದಿ ಚಿತ್ರರಂಗದಲ್ಲಿ ಇಷ್ಟೊಂದು ಮಹಿಳಾ ನಿರ್ದೇಶಕಿಯರು ಕಾಣಿಸಿಕೊಂಡರೂ ದಕ್ಷಿಣ ಭಾರತದ ಚಿತ್ರರಂಗದಲ್ಲಿ ತಮ್ಮ ಹೆಜ್ಜೆಯ ಗುರುತುಗಳನ್ನು ಮೂಡಿಸಿದ ಮಹಿಳೆಯರ ಸಂಖ್ಯೆ ಕಡಿಮೆ ಎಂದೇ ಹೇಳಬೇಕು.

ದಕ್ಷಿಣ ಭಾರತದ ಚಿತ್ರರಂಗ ಅನೇಕ ತಾರೆಯರನ್ನು ಸೃಷ್ಟಿಸಿದರೂ ತೆರೆಯ ಹಿಂದಿನ ನಿರ್ದೇಶಕಿ, ಛಾಯಾಗ್ರಾಹಕಿ, ನೃತ್ಯನಿರ್ದೇಶಕಿಯರನ್ನು ರೂಪಿಸದಿರುವುದಕ್ಕೆ ಕಾರಣವೇನು? ಎಂಬ ಪ್ರಶ್ನೆಗೆ ಉತ್ತರ ಅರಸುವುದು ಸ್ವಲ್ಪ ಕಷ್ಟವಾದರೂ ಇಲ್ಲಿನ ಸಾಮಾಜಿಕ ಕಟ್ಟುಪಾಡುಗಳು ಎಂದು ಅನ್ನಿಸುತ್ತದೆ.

ಇದರ ಜೊತೆಗೆ ಸಂಪ್ರದಾಯಸ್ಥ ವಾತಾವರಣ ತಾರೆಯರನ್ನು ನಿರ್ಮಿಸಿ ಮುಂಬೈ ಸಾಮ್ರಾಜ್ಯದಲ್ಲಿ ನೆಲೆನಿಲ್ಲಲು ಕಳುಹಿಸಿ, ತೆರೆಯ ಹಿಂದಿನ ಕೌಶಲಕ್ಕೆ ಏಕೆ ಹೆಚ್ಚಿನ ಉತ್ತೇಜನ ನೀಡಲಿಲ್ಲ? ಎಂಬ ಪ್ರಶ್ನೆಯೂ ಸಹಜವಾಗಿಯೇ ಕಾಡುತ್ತದೆ.

ಆದರೆ ದಕ್ಷಿಣ ಭಾರತದ ಚಿತ್ರರಂಗದಲ್ಲಿ ಹೆಸರು ಹೇಳಲು ಒಬ್ಬ ನಿರ್ದೇಶಕಿಯೂ ಇಲ್ಲ ಎನ್ನುವಂಥ ಪರಿಸ್ಥಿತಿ ಏನಿಲ್ಲ. ಕೆಲವರು ನಿರ್ದೇಶನಕ್ಕೆ ಕೈಹಾಕಿ ಚಿತ್ರವನ್ನು ನಿರ್ದೇಶಿಸಿಯೂ ಇದ್ದಾರೆ. ಆದರೆ ಅವರು ಅಪರ್ಣಾ ಸೇನ್, ಕಲ್ಪನಾ ಲಾಜ್ಮಿ, ವಿಜಯ್ ಮೆಹ್ತಾ, ಸಾಯಿ ಪರಾಂಜಪೆಯಂತೆ ರಾಷ್ಟ್ರಮಟ್ಟದಲ್ಲಿ ತಮಗೊಂದು ಸ್ಥಾನ ಕಲ್ಪಿಸಿಕೊಳ್ಳಲು ಸಾಧ್ಯವಾಗಲಿಲ್ಲ ಅಷ್ಟೇ.

ಸ್ವಲ್ಪ ಈ ಮಟ್ಟದಲ್ಲಿ ಹೆಸರುಮಾಡಿದ ನಿರ್ದೇಶಕಿಯೆಂದರೆ ಸುಹಾಸಿನಿ. ತಮ್ಮ ಇತ್ತೀಚಿನ ಚಿತ್ರ 'ಇಂದಿರಾ' ಮೂಲಕ ಸುಹಾಸಿನಿ ರಾಷ್ಟ್ರಮಟ್ಟದಲ್ಲೂ ಸಾಕಷ್ಟು ಹೆಸರು ಮಾಡಿದ್ದಾರೆ. ವಾಸ್ತವ ಸಂಗತಿಯೆಂದರೆ ಸುಹಾಸಿನಿಗಿದ್ದ ಚಲನಚಿತ್ರರಂಗದ ಹಿನ್ನೆಲೆ ತಂದೆ ಚಾರುಹಾಸನ್ ರಾಷ್ಟ್ರಪ್ರಶಸ್ತಿ ಪಡೆದ ನಟ. ಚಿಕ್ಕಪ್ಪ ಕಮಲ್‌ಹಾಸನ್‌ರಂತೂ ಚಲನಚಿತ್ರರಂಗದ ಇತಿಹಾಸದ ಒಂದು ಭಾಗ. ಸುಹಾಸಿನಿ ಅವರ ಕಿಮ್ಮತ್ತನ್ನು ಕಡಿಮೆಮಾಡಲು ನಾನು ಈ ಮಾತುಗಳನ್ನು ಹೇಳುತ್ತಿಲ್ಲ. ಕೇವಲ ಆಕೆಯ ಹಿನ್ನೆಲೆ ಅರಸುವ ಕಾರಣದ ಉಲ್ಲೇಖ ಮಾತ್ರದಿಂದ ಸುಹಾಸಿನಿ ಸ್ವತಃ ಛಾಯಾಗ್ರಹಣವನ್ನೂ ಶಾಸ್ತ್ರೀಯವಾಗಿ ಅಭ್ಯಸಿಸಿದವರು. ಅನಿವಾರ್ಯವಾಗಿ ನಟಿಯಾದವರು (ಮಹೇಂದ್ರನ್ ಅವರ 'ನೆಂಜತ್ತೈ ಕಿಳ್ಳಾದೆ' ಚಿತ್ರದ ಮೂಲಕ). ಖ್ಯಾತ ನಿರ್ದೇಶಕ ಮಣಿರತ್ನಂ ಅವರನ್ನು ಮದುವೆಯಾದರೂ ಸ್ವಂತಿಕೆ ಕಳೆದುಕೊಳ್ಳದ ನಿರ್ದೇಶಕಿ ಸುಹಾಸಿನಿ.

ಪತಿ ಖ್ಯಾತ ನಿರ್ದೇಶಕರಾದರೂ ಅವರ ನೆರಳೂ ಬೀಳದಂತೆ 'ಇಂದಿರಾ' ಚಿತ್ರವನ್ನು ನಿರ್ದೇಶಿಸುವ ಮೂಲಕ ಸ್ವತಂತ್ರ ನಿರ್ದೇಶಕಿಯಾದ ಸುಹಾಸಿನಿ ಕೆಳಜಾತಿಯ ಹೆಣ್ಣೊಬ್ಬಳು. ವರ್ಗವೈಶಮ್ಯವನ್ನು ನಿರ್ನಾಮಮಾಡಿ ಶತಮಾನಗಳಿಂದ ಮಡುಗಟ್ಟಿದ ಹಳ್ಳಿಯ ದ್ವೇಷಾಸೂಯೆಗಳನ್ನೂ ಕಿತ್ತೊಗೆಯುವ ಕಥೆಯನ್ನಾಧರಿಸಿದ ಚಿತ್ರ ನಿರ್ಮಿಸಿದರು. (ಇದಕ್ಕೂ ಮುನ್ನ 'ಜಾನಿ' ಎಂಬ ರಜನೀಕಾಂತ್ ನಟಿಸಿದ ಚಿತ್ರಕ್ಕೆ ಛಾಯಾಗ್ರಾಹಕರಾಗಿ ಕೂಡ ಸುಹಾಸಿನಿ ಕೆಲಸ ಮಾಡಿದ್ದರು. ಇದರ ನಿರ್ದೇಶಕ ಮಹೇಂದ್ರನ್.) ಸುಹಾಸಿನಿಯಂತೆ ಕ್ಯಾಮರಾ ಹಿಡಿದ ಮತ್ತೊಬ್ಬ ಮಹಿಳೆ ಬಿ. ಆರ್. ಪಂತುಲು ಅವರ ಮಗಳಾದ ವಿಜಯಲಕ್ಷ್ಮಿ.

ನಿರ್ದೇಶನ ಪ್ರವೃತ್ತಿ ಮಹಿಳೆಯರಲ್ಲಿ ಆರಂಭವಾದದ್ದು 1950ರ ಸುಮಾರಿನಲ್ಲೇ. ಅದು ಎಂ.ಜಿ.ಆರ್, ಶಿವಾಜಿ ಗಣೇಶನ್, ಜೆಮಿನಿ ಗಣೇಶನ್, ಎನ್.ಟಿ.ರಾಮರಾವ್, ಅಕ್ಕಿನೇನಿ ನಾಗೇಶ್ವರರಾವ್, ಡಾ. ರಾಜಕುಮಾರ್, ಸಾಹುಕಾರ್ ಜಾನಕಿ, ಅಂಜಲಿದೇವಿ, ಜಮುನಾ ಮುಂತಾದವರು ವಿಜೃಂಭಿಸುತ್ತಿದ್ದ ಕಾಲದಲ್ಲೇ ಆಗಿನ ಖ್ಯಾತನಟಿ ಭಾನುಮತಿ ಕೂಡ ನಿರ್ದೇಶನಕ್ಕೆ ಕೈಹಾಕಿದರು.

ತೆಲುಗು ಚಿತ್ರರಂಗದ ಖ್ಯಾತನಟ ಕೃಷ್ಣ ಅವರ ಪತ್ನಿ ವಿಜಯ ನಿರ್ಮಲಾ ಅವರು ಕೂಡ ನಿರ್ದೇಶನಕ್ಕೆ ಕೈಹಾಕಿ 'ಎಸ್ ನೇನಂಟೆ ನೇನೆ' ತೆಲುಗು ಚಿತ್ರ ನಿರ್ಮಿಸಿದರು. ಆದರೆ ಈ ಚಿತ್ರ ಹೇಳಿಕೊಳ್ಳುವಂಥ ಯಶಸ್ಸನ್ನೇನೂ ಕಾಣಲಿಲ್ಲ.

ಎಂಭತ್ತರ ದಶಕದ ಆರಂಭದಲ್ಲಿ ಕೆ. ಬಾಲಚಂದರ್ ಅವರು ಖ್ಯಾತನಟಿ ಲಕ್ಷ್ಮೀಯನ್ನು ಚಿತ್ರವೊಂದನ್ನು ನಿರ್ದೇಶಿಸುವಂತೆ ಆಹ್ವಾನಿಸಿದರು. 'ಮಳಲೈ ಪಟ್ಟಾಲಂ' ಎಂಬ ಅವರ ನಿರ್ದೇಶನದ ಚಿತ್ರ ಸಾಧಾರಣ ಯಶಸ್ಸನ್ನು ಕಂಡಿತು. ಇದರಲ್ಲಿ ಬಾಲಚಂದರ್ ಅವರದು 'ಹಿಂದಿನ ಸೀಟಿನ ನಿಯಂತ್ರಣ' ಎಂದು ಕೆಲವರು ಟೀಕಿಸಿದ್ದೂ ಉಂಟು. ಅನಂತರ ಅದೇಕೋ ಲಕ್ಷ್ಮೀ ಚಿತ್ರ ನಿರ್ದೇಶಿಸುವ ಸಾಹಸ ಮಾಡಲಿಲ್ಲ.

ಇದೇ ಸುಮಾರಿನಲ್ಲಿ ಶೋಭಾ ಚಂದ್ರಶೇಖರ್ ಎಂಬ ಮತ್ತೊಬ್ಬ ನಿರ್ದೇಶಕಿ ಮಮತಾ ಕುಲಕರ್ಣಿಯನ್ನು ನಾಯಕಿಯನ್ನಾಗಿಸಿ 'ನನ್‌ಬರ್‌ಗಳ್' ಎಂಬ ಚಿತ್ರವೊಂದನ್ನು ನಿರ್ದೇಶಿಸಿದರು. 1990-91ರಲ್ಲಿ ಬಿಡುಗಡೆಯಾದ ಈ ಚಿತ್ರ ಯಶಸ್ವಿಯಾದರೂ ಅದೇಕೊ ಶೋಭಾ ಮತ್ತೆ ತಮ್ಮ ಪತಿಯ ನೆರಳಿನಲ್ಲಿ ಕಾಲಕಳೆಯುವುದರಲ್ಲಿಯೇ ತೃಪ್ತಿ ಕಂಡುಕೊಂಡರು.

ಕನ್ನಡದಲ್ಲಿ ಜಯಶ್ರೀ ಎಂಬ ನಿರ್ದೇಶಕಿ ತೆಲುಗಿನಿಂದ ಬಂದು 'ಕೋಣ ಈದೈತೆ' ಎಂಬ ಚಿತ್ರ ನಿರ್ದೇಶಿಸಿದರು. ಚಿತ್ರ ಸೆನ್ಸಾರ್ ಸುಳಿಗೆ ಸಿಕ್ಕಿಕೊಂಡಿತು. ಅನಂತರ ಚಿತ್ರದ ಕೆಲವು ಭಾಗಗಳನ್ನು ಪುನರ್ ಚಿತ್ರೀಕರಿಸಿ ಬಿಡುಗಡೆ ಮಾಡಿದರೂ ಹೇಳಿಕೊಳ್ಳುವಂಥ ಯಶಸ್ಸನ್ನೇನೂ ಚಿತ್ರ ಕಾಣಲಿಲ್ಲ.

ಸದ್ಯಕ್ಕೆ ಈ ಸಾಹಸಕ್ಕೆ ಕೈ ಹಾಕುವ ಧೈರ್ಯವನ್ನು ಯಾರೂ ಮಾಡದಿರುವುದರಿಂದ ದಕ್ಷಿಣ ಚಿತ್ರರಂಗದಲ್ಲಿ ಖಾಲಿ ವಾತಾವರಣವಿದೆ.

★ ★ ★ ★

# ಭಾರತದ ಮೊದಲ ಮಹಿಳಾ ಇಂಜಿನಿಯರ್

- ನೇಮಿಚಂದ್ರ

ಇಂದು ಇಂಜಿನಿಯರಿಂಗ್ ರಂಗದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಮಹಿಳೆಯರನ್ನು ಕಾಣುತ್ತೇವೆ. ಆದರೆ ಕೇವಲ ಐದೂವರೆ ದಶಕಗಳ ಹಿಂದೆ ಇಂಜಿನಿಯರಿಂಗ್ ಸಂಪೂರ್ಣ ಪುರುಷರಂಗವಾಗಿದ್ದು, ಮಹಿಳೆಯರಿಗೆ ಪ್ರವೇಶ ನಿಷೇಧಿಸಿತ್ತು. ಕಳೆದ ಶತಮಾನದಲ್ಲಿಯೇ ವೈದ್ಯರಂಗಕ್ಕೆ ಮಹಿಳೆಯರು ಪ್ರವೇಶಿಸಿದ್ದರೂ, 1940ರವರೆಗೆ ಇಂಜಿನಿಯರಿಂಗ್‌ರಂಗ ಮಹಿಳೆಗೆ ಮುಚ್ಚಿತ್ತು. ಈ ಮುಚ್ಚಿದ ಬಾಗಿಲನ್ನು ತೆರೆಸಿದ ಕೀರ್ತಿ ಎ. ಲಲಿತಾ ಮತ್ತು ಆಕೆಯ ತಂದೆ ಪ್ರೊ. ಪಪ್ಪು ಸುಬ್ಬರಾವ್ ಅವರಿಗೆ ಸೇರುತ್ತದೆ.

ಎ. ಲಲಿತಾ ಆಂಧ್ರ ಪ್ರದೇಶದ ಅಮಲಾಪುರಕ್ಕೆ ಸೇರಿದ ವಿದ್ಯಾವಂತ ಕುಟುಂಬದಿಂದ ಬಂದವರು. ಮಾತೃಭಾಷೆ ತೆಲುಗು. ಎಂಟು ಜನ ಮಕ್ಕಳಲ್ಲಿ, ಐದನೆಯವರಾಗಿ ಲಲಿತಾ 27 ಆಗಸ್ಟ್, 1919ರಲ್ಲಿ ಹುಟ್ಟಿದರು. ತಾಯಿ ಕಾಮಾಕ್ಷಮ್ಮ. ತಂದೆ ಪ್ರೊ. ಪಪ್ಪು ಸುಬ್ಬರಾವ್ ಮದ್ರಾಸಿನ ಗಿಂಡಿ ಕಾಲೇಜಿನಲ್ಲಿ ಎಲೆಕ್ಟ್ರಿಕಲ್ ವಿಭಾಗದಲ್ಲಿ ಪ್ರಾಧ್ಯಾಪಕರಾಗಿದ್ದವರು. ಹದಿನಾಲ್ಕನೇ ವರ್ಷಕ್ಕೆ ಲಲಿತಾರವರ ವಿವಾಹ ರಾಮಚಂದ್ರ ರಾವ್ ಅವರೊಡನೆ ಜರುಗಿತ್ತು. 1936ರಲ್ಲಿ ಲಲಿತಾ ಮೆಟ್ರಿಕ್ ಪಾಸು ಮಾಡಿದರು. ಹದಿನೆಂಟರ ಎಳೆ ವಯಸ್ಸಿಗೆ ಲಲಿತಾ ಒಂದು ಹೆಣ್ಣು ಮಗುವಿನ ತಾಯಿಯಾದರು. ಮಗು ಹುಟ್ಟಿದ ನಾಲ್ಕು ತಿಂಗಳಿಗೆ ಪತಿ ಸಿಡುಬು ರೋಗಕ್ಕೆ ತುತ್ತಾಗಿ ಮರಣಿಸಿದಾಗ, ಆ ಕಾಲದ ಸಂಪ್ರದಾಯಗಳ ಸಂಕೋಲೆಗಳ ವಿಧವೆಯ ವಿಧಿ ಆಕೆಯ ಎದುರಲ್ಲಿ ಕಾದಿತ್ತು. ವಿದ್ಯಾವಂತ ಮನೆತನಕ್ಕೆ ಸೇರಿದ ಲಲಿತಾರವರನ್ನು ಆ ವಿದ್ಯೆಯೇ ಕಾಪಾಡಿತು. ಪರರ ಆಶ್ರಯದಲ್ಲಿ ಸಂಪ್ರದಾಯಗಳ ಕುಣಿಕೆಯಲ್ಲಿ ಕಮರಿ ಹೋಗುವ ವಿಧವೆಯರ ಬದುಕನ್ನು ಪ್ರತ್ಯಕ್ಷ ನೋಡಿದ್ದ ತಂದೆ, ತಮ್ಮ ಮಗಳು ಸ್ವಂತ ಕಾಲುಗಳ ಮೇಲೆ ನಿಲ್ಲಬೇಕಾದ ಅಗತ್ಯವನ್ನು ಕಂಡುಕೊಂಡರು. ಲಲಿತಾ ಪುಟ್ಟ ಮಗುವನ್ನಿಟ್ಟುಕೊಂಡು ಮತ್ತೆ ಓದಲು ಆರಂಭಿಸಿದರು. ಮದ್ರಾಸಿನ 'ಕ್ವೀನ್ಸ್ ಮೇರಿ ಕಾಲೇಜಿ'ಗೆ ಇಂಟರ್‌ಮೀಡಿಯೇಟ್ ಓದಲು ಸೇರಿದರು. ಅಕ್ಕ ಕಮಲಾ ಆಕೆಯ ಪುಟ್ಟ ಮಗುವನ್ನು ನೋಡಿಕೊಳ್ಳಲು ಸಹಾಯಕರಾದರು. ಗಣಿತದಲ್ಲಿ ಮುಂದಿದ್ದ ಮಗಳ ಪ್ರತಿಭೆಯನ್ನು ಕಂಡ ತಂದೆ, ತಮ್ಮ ನಾಲ್ಕು ಜನ ಗಂಡು ಮಕ್ಕಳಂತೆಯೇ ಆಕೆಯನ್ನೂ ಇಂಜಿನಿಯರ್ ಮಾಡಲು ಬಯಸಿದರು. ಲಲಿತಾ ಅವರಿಗೂ ಈ ವಿಷಯದಲ್ಲಿ ಆಸಕ್ತಿ ಇತ್ತು. ಆದರೆ ಆ ಕಾಲಕ್ಕೆ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಮಹಿಳೆಯರಿಗೆ ಪ್ರವೇಶವಿರಲಿಲ್ಲ. 'ಮಹಿಳೆಯರು ಇಂಜಿನಿಯರ್ ಆಗಲು ಸಮರ್ಥರಲ್ಲ' ಎಂಬ ಗಟ್ಟಿ ನಂಬುಗೆಯ ವಾತಾವರಣ. ''ಏಕೆ ಸಾಧ್ಯವಿಲ್ಲ? ಹೆಣ್ಣು ಮಕ್ಕಳನ್ನು ಕಟ್ಟಡ ಕಟ್ಟುವ ಕಷ್ಟದ ಕೆಲಸಕ್ಕೆ ಕೂಲಿ ಕಾರ್ಮಿಕರಾಗಿ ತೆಗೆದುಕೊಳ್ಳುತ್ತೀರಿ. ನನ್ನ ಮಗಳು ಗಣಿತದಲ್ಲಿ, ಓದಿನಲ್ಲಿ ಪ್ರತಿಭಾವಂತಳಿದ್ದಾಳೆ, ಅವಳಿಗೇಕೆ ಇಂಜಿನಿಯರ್ ಆಗಲು ಸಾಧ್ಯವಿಲ್ಲ?'' ಎಂದು ವಾದಿಸಿ, ಗುದ್ದಾಡಿದ ತಂದೆ, ಕಡೆಗೂ ಮದ್ರಾಸ್ ವಿಶ್ವವಿದ್ಯಾಲಯದ ಸೆನೆಟ್ ತಮ್ಮ ಕಾಯಿದೆಯನ್ನು ಬದಲಾಯಿಸಿ 1940ರಲ್ಲಿ ಮಹಿಳೆಯರಿಗೆ ಬಾಗಿಲು ತೆರೆಸುವಲ್ಲಿ ಯಶಸ್ವಿಯಾದರು. ಅವಕಾಶ ದೊರೆತೊಡನೆ ಲಲಿತಾ ಗಿಂಡಿ ಇಂಜಿನಿಯರಿಂಗ್ ಕಾಲೇಜು ಸೇರಿ, ಎಲೆಕ್ಟ್ರಿಕಲ್ ವಿಷಯವನ್ನು ಆಯ್ದುಕೊಂಡರು. ನಂತರ ಅದೇ ವರ್ಷ ಟ್ರಾವನ್ಕೋರಿನ ಲೀಲಾ ಜಾರ್ಜ್ ಸಿವಿಲ್ ವಿಭಾಗದಲ್ಲಿ ಬಂದು ಸೇರಿದರು. ಲಲಿತಾ ಪೂರ್ಣ ಗಮನ ಮತ್ತು ಶ್ರಮದಿಂದ ಓದಿದರು. ಪಾರ್ಕಸ್ಮಿತ್ ಪುಸ್ತಕದ ಅಷ್ಟೂ ಎಲೆಕ್ಟ್ರಿಕಲ್ ಸಮಸ್ಯೆಗಳನ್ನು ಗುಣಿಸಿ ಪರಿಹರಿಸಿದ್ದರು. ತುಂಬಾ ವ್ಯವಸ್ಥಿತ ರೀತಿಯಲ್ಲಿ ಕೆಲಸ ಮಾಡುವುದು ಲಲಿತಾರ ಸ್ವಭಾವವಾಗಿತ್ತು. ಲಲಿತಾ ಮತ್ತು ಲೀಲಾ ಜಾರ್ಜ್ 1943ರಲ್ಲಿ ಆನರ್ಸ್ ಗೌರವದೊಂದಿಗೆ ಬಿ.ಇ. ಪದವಿ ಪಡೆದು, ಭಾರತದ ಮೊಟ್ಟಮೊದಲ ಮಹಿಳಾ ಇಂಜಿನಿಯರ್ ಆದರು.



ಆ ಕಾಲದಲ್ಲಿ ಇಂಜಿನಿಯರಿಂಗ್ ಪದವಿ ಪಡೆದೊಡನೆ ಒಂದು ವರ್ಷದ ತರಪೇತು ಪಡೆವ ಅವಶ್ಯಕತೆಯಿತ್ತು. 1943ರಲ್ಲಿ ಪದವಿ ಪಡೆದ ನಂತರ ಲಲಿತಾ ಬಿಹಾರದ ಜಮಲಪುರದಲ್ಲಿರುವ 'ಲೋಕೋ ವರ್ಕ್‌ಶಾಪ್'ನಲ್ಲಿ ಇಂಜಿನಿಯರಿಂಗ್ ತರಪೇತು ಶಿಕ್ಷಣಕ್ಕೆ ಸೇರಿದರು. ಇಲ್ಲಿಯೂ ಈಕೆಯನ್ನು 'ಸ್ಪೆಷಲ್ ಕೇಸ್' ಎಂದು

ತೆಗೆದುಕೊಂಡು ಅಂತೂ ಒಂದು ವರ್ಷದ ತರಪೇತು ಮುಗಿಸಲು ಅವಕಾಶ ಮಾಡಿಕೊಟ್ಟರು. ಪ್ರತಿದಿನ ಲಲಿತಾ ತಮ್ಮ ವರ್ಕ್‌ಶಾಪ್‌ಗೆ ಸೈಕಲ್ ತುಳಿದು ಹೋಗುತ್ತಿದ್ದರು. ತರಪೇತು ಮುಗಿದ ನಂತರ ಲಲಿತಾರವರಿಗೆ ಕಲಕತ್ತಾದಲ್ಲಿ 'ಕೇಂದ್ರ ವಿದ್ಯುಚ್ಛಕ್ತಿ ನಿಗಮ'ದಲ್ಲಿ ಸಹಾಯಕ ಇಂಜಿನಿಯರ್ ಆಗಿ ಕೆಲಸ ದೊರೆಯಿತು. ನಂತರ ಅವರು ಸಿಮ್ಲಾದಲ್ಲಿಯೂ ಕೆಲಸ ಮಾಡಿದರು. 1948ರಲ್ಲಿ ಲಲಿತಾ ಕಲ್ಕತ್ತೆಯ 'ಅಸೋಸಿಯೇಟ್ ಇಂಜಿನಿಯರ್ಸ್ ಇಂಡಸ್ಟ್ರೀಸ್'ನಲ್ಲಿ ವಿನ್ಯಾಸ ವಿಭಾಗಕ್ಕೆ ಸೇರಿ, ತಮ್ಮ ನಿವೃತ್ತಿಯವರೆಗೂ ಇದೇ ಕಂಪನಿಯಲ್ಲಿ ದುಡಿದರು. ಏಕಾಂಗಿ ಮಹಿಳೆಯಾಗಿ ಲಲಿತಾ ವಾಸದ ಸ್ಥಳ ದೊರೆಯದೆ ಬಹಳಷ್ಟು ಪಾಡುಪಟ್ಟರು. ಕೆಲವು ಸಮಯ ಅವರು ಹೋಟಲಿನಲ್ಲೂ ವಾಸಿಸುವಂಥಾ ಪರಿಸ್ಥಿತಿ ಬಂದದ್ದುಂಟು. ಕಡೆಗೆ ತಮ್ಮದೇ ಮನೆಯನ್ನು ಪಡೆದು ಸಮಸ್ಯೆಯನ್ನು ಪರಿಹರಿಸಿಕೊಂಡರೂ, ನಮ್ಮ ಸಮಾಜದಲ್ಲಿ ಏಕಾಂಗಿ ಮಹಿಳೆಯರಿಗೆ ವಾಸಕ್ಕೆ ಅನುಕೂಲಗಳಿಲ್ಲ ಎಂಬ ಕೊರತೆ ಅವರನ್ನು ಬಹಳಷ್ಟು ಕಾಡಿತ್ತು. ತಮ್ಮ ದೀರ್ಘ ವೃತ್ತಿ ಜೀವನದ ಅವಧಿಯಲ್ಲಿ ಲಲಿತಾ ಲಂಡನ್ನಿನ 'ಇನ್‌ಸ್ಟಿಟ್ಯೂಟ್ ಆಫ್ ಇಂಜಿನಿಯರ್ಸ್'ನ ಪೂರ್ಣ ಸದಸ್ಯತ್ವವನ್ನು ಪಡೆದಿದ್ದರು. ಅಮೆರಿಕೆಯ 'ವಿಮೆನ್ ಇಂಜಿನಿಯರ್ಸ್ ಸೊಸೈಟಿ'ಯ ಸಹಸದಸ್ಯತ್ವವನ್ನೂ ಪಡೆದಿದ್ದರು. ಅಷ್ಟೇ ಅಲ್ಲದೆ, ಅಮೆರಿಕೆಯಲ್ಲಿ ನಡೆದ 'ವಿಶ್ವ ಮಹಿಳಾ ಇಂಜಿನಿಯರುಗಳ ಸಮ್ಮೇಳನ'ದಲ್ಲಿ ಭಾರತವನ್ನು ಪ್ರತಿನಿಧಿಸಿದರು. ಲಲಿತಾರವರ ಉದಾಹರಣೆ ಅನೇಕ ಹೆಣ್ಣು ಮಕ್ಕಳಿಗೆ ಇಂಜಿನಿಯರಿಂಗ್ ರಂಗಕ್ಕೆ ನುಗ್ಗುವ ಸ್ಫೂರ್ತಿ ಮತ್ತು ಆತ್ಮವಿಶ್ವಾಸವನ್ನು ನೀಡಿತು.

ಇಷ್ಟೆಲ್ಲ ಸಾಧನೆಯ ಲಲಿತಾ 1979ರಲ್ಲಿ ತಮ್ಮ ಅರವತ್ತನೆಯ ಹುಟ್ಟುಹಬ್ಬದ ಕೊಂಚ ನಂತರ ಪಾರ್ಶ್ವವಾಯುವಿಗೆ ಬಲಿಯಾಗಿ ತೀರಿಕೊಂಡರು. ಇವರ ಸಾಧನೆಯನ್ನು ನೆನೆಯುವ ತಮ್ಮ, ವಿಂಗ್ ಕಮಾಂಡರ್ ಪಪ್ಪು ಪ್ರಕಾಶ್ ತಮ್ಮ ತಂದೆಯ ಹೆಸರಿನಲ್ಲಿ ಮಹಿಳಾ ಇಂಜಿನಿಯರಿಂಗ್ ವಿದ್ಯಾರ್ಥಿನಿಯರಿಗೆ ವಿದ್ಯಾರ್ಥಿವೇತನವೊಂದನ್ನು ಸ್ಥಾಪಿಸಿದ್ದಾರೆ. ಲಲಿತಾರವರ ಮಗಳು ಶ್ಯಾಮಲಾ ಉತ್ತಮ ವಿದ್ಯಾಭ್ಯಾಸವನ್ನು ಪಡೆದು ಶಿಕ್ಷಣ ವೃತ್ತಿಯನ್ನು ಆಯ್ದುಕೊಂಡರು. ಇಂದು ಅವರು ತಮ್ಮ ಪತಿಯೊಡನೆ ವಾಷಿಂಗ್ಟನ್‌ನಲ್ಲಿದ್ದಾರೆ. ಲಲಿತಾರವರೊಡನೆ ಮೊದಲ ಇಂಜಿನಿಯರ್ ಆದ ಕೀರ್ತಿಯನ್ನು ಹಂಚಿಕೊಂಡ ಲೀಲಾ ಜಾರ್ಜ್ ಅವರ ವಿವರಗಳು ದೊರೆತಿಲ್ಲ.

★ ★ ★ ★

ಕಂಬನಿ

# ನಂದಿಹೋದ ಸ್ತ್ರೀಪರ ಜ್ಯೋತಿ - ಸಾವಿತ್ರಮ್ಮ

- ಎನ್. ಗಾಯತ್ರಿ

'ಮಾತು ಮುತ್ತು, ಮೌನ ಬಂಗಾರ' ಎಂಬ ಮಾತಿಗೆ ಅನ್ವರ್ಥವಾದ ಸಾವಿತ್ರಮ್ಮ ಕಳೆದ ಡಿಸೆಂಬರ್ 27ರಂದು ಕೊನೆಯುಸಿರೆಳೆದರು. ಅವರ ಸಾವಿನಿಂದ ನವೋದಯದಿಂದ ಇಂದಿನವರೆಗೂ ದೀರ್ಘಕಾಲದ ಸಾಹಿತ್ಯಕೊಂಡಿಯೊಂದು ಕಡಿದು ಬಿತ್ತು. ಸಾವಿತ್ರಮ್ಮನವರಿಗೂ 'ಅಚಲ' ಬಳಗಕ್ಕೂ ಇದ್ದ ಸಂಬಂಧ ಗಾಢವಾದದ್ದು. ಅವರ ಸಾವಿನಿಂದ ಅಚಲ ತನ್ನ ಆತ್ಮೀಯ ಬಂಧುವನ್ನು ಕಳೆದುಕೊಂಡಂತಾಗಿದೆ.



ನನ್ನ ಮತ್ತು ನನ್ನ ಹಿಂದಿನ ಪೀಳಿಗೆಯ ಓದುವ ಹವ್ಯಾಸವಿದ್ದವರಿಗೆ ಎಚ್.ವಿ.ಸಾವಿತ್ರಮ್ಮನವರ ಅನುವಾದಿತ ಕೃತಿಗಳಾದ ಗೋರಾ, ನೌಕಾಘಾತ, ಮದುವಣಗಿತ್ತಿ ಮುಂತಾದವು ತುಂಬ ಚಿರಪರಿಚಿತವಾದ ಆಪ್ತ ಕೃತಿಗಳು. ಅವನ್ನು ನಾವು ಅನುವಾದಿತ ಕೃತಿಗಳೆಂದೇ ಭಾವಿಸಿರಲಿಲ್ಲ. ಸ್ವತಂತ್ರ ಕೃತಿಗಳೆಂಬಂತೆ ಓದಿಸಿಕೊಂಡು ಹೋಗುವ ಈ ಕೃತಿಗಳ ಕರ್ತೃ ಯಾರೆಂದೂ ನಾವು ತಲೆಕೆಡಿಸಿಕೊಂಡಿರಲಿಲ್ಲ. ನಮಗೆ ಕತೆಯಷ್ಟೇ ಮುಖ್ಯವಾಗಿತ್ತು. ಆದ್ದರಿಂದಲೇ ಈ ಕೃತಿಗಳನ್ನು ಅನುವಾದಿಸಿದ ಸಾವಿತ್ರಮ್ಮ ಮುಂದೆ ಏನನ್ನು ಬರೆದರು, ಎಂದು ನಾವು ತಲೆಕೆಡಿಸಿಕೊಳ್ಳಲೇ ಇಲ್ಲ.

ಎಂಭತ್ತರ ದಶಕದ ಉತ್ತರಾರ್ಧದಲ್ಲಿ ಸಾವಿತ್ರಮ್ಮನವರ 'ರಾಮಾಯಣ'ದ ಕೃತಿಯ ಚರ್ಚೆ ನಮ್ಮ ಸುತ್ತಮುತ್ತ ನಡೆಯುತ್ತಿತ್ತು. ವಿಮರ್ಶಕಿಯರಾದ ಡಾ. ವಿಜಯಾ ದಬ್ಬೆ, ಡಾ। ಬಿ.ಎನ್. ಸುಮಿತ್ರಾಬಾಯಿ ಮತ್ತು ಡಾ. ಅನುಪಮಾ ನಿರಂಜನರವರು ಸಭೆಗಳಲ್ಲಿ, ಲೇಖನಗಳಲ್ಲಿ ಸಾವಿತ್ರಮ್ಮನವರ ಕೃತಿಗಳನ್ನು ವಿಮರ್ಶಿಸುತ್ತಿದ್ದರು; ಮೆಚ್ಚುಗೆಯ ನುಡಿಗಳನ್ನು ಹೇಳಿದ್ದರು. ಸಾಹಿತ್ಯದ ವಿದ್ಯಾರ್ಥಿಯಾದ ನನಗೆ, ಸಾವಿತ್ರಮ್ಮನವರ ಕೃತಿಗಳ ಬಗ್ಗೆ ಆಸಕ್ತಿ ಮೂಡಿದ್ದು ಆಗ. 1990ರಲ್ಲಿ ಅವರ 'ವಿಮುಕ್ತಿ' ಕಾದಂಬರಿಯೂ ಹೊರಬಂದ ನಂತರ ಸಾವಿತ್ರಮ್ಮನವರ ಕೃತಿಗಳ ಬಗ್ಗೆ ನನ್ನಲ್ಲಿ ಹೆಚ್ಚಿನ ಆಸಕ್ತಿ ಮೂಡಿತು. ಅವರ ಸಣ್ಣ ಕತೆಗಳ ವೈಚಾರಿಕತೆಯ ನೆಲೆಗಳು ನನ್ನನ್ನು ದಿಗ್ಭ್ರಮೆಗೊಳಿಸಿತು. ಗೃಹಿಣಿ ಜೀವನದ ಎಲ್ಲ ಸುಖ ಸಂತೋಷಗಳ ಮಧ್ಯೆಯೂ ಅತೃಪ್ತಿಯನ್ನು ಕಾಣುವ ಇವರ ಕತೆಗಳ ಸ್ತ್ರೀ ಪಾತ್ರಗಳು ಹೆಣ್ಣಿನ ಹೊಸ ಸಮಸ್ಯೆಯತ್ತ ನನ್ನ ಗಮನ ಸೆಳೆದವು. ಅರವತ್ತರ ದಶಕದಲ್ಲಿ ಅಮೆರಿಕೆಯ ಸಂದರ್ಭದಲ್ಲಿ ಸ್ತ್ರೀವಾದಿ ಬೆಟ್ಟಿ ಫ್ರೈಡನ್ ವಿವರಿಸಿದ 'ಫೆಮಿನೈನ್ ಮಿಸ್ಟಿಕ್'ನ ಛಾಯೆಯ ಆಲೋಚನೆಯನ್ನು ಅದಕ್ಕೂ ಮುಂಚೆಯೇ ಸಾವಿತ್ರಮ್ಮನವರ ಕತೆಗಳಲ್ಲಿ ಚಿತ್ರಿತವಾದುದನ್ನು ಗುರುತಿಸಿದೆ. ಪರಿಪೂರ್ಣತೆಗೆ ತುಡಿಯುವ ಹೆಣ್ಣಿನ ಪ್ರತೀಕಗಳಾಗಿ ನಮ್ಮ ಮುಂದೆ ನಿಲ್ಲುವ ಅವರ ರುಕ್ಮಿಣಿ, ಸುಶೀಲೆ, ಸರಸಿ ಪಾತ್ರಗಳು 'ಹೆಣ್ಣಿನ ಸಾರ್ಥಕತೆ ಎಲ್ಲಿದೆ?' ಎಂಬ ಪ್ರಶ್ನೆಯನ್ನು ನಮ್ಮಲ್ಲಿ ಚಿಂತನೆಗೆ ಹಚ್ಚಿದವು. ಹೀಗೆ ಕಳೆದ ದಶಕದಲ್ಲಿ ಪ್ರಬಲವಾಗಿ ಪ್ರಚುರಗೊಂಡ ಸ್ತ್ರೀವಾದಿ ವಿಮರ್ಶಾಮಾರ್ಗ ಕನ್ನಡದ ಒಂದು ಅಪೂರ್ವ ಪ್ರತಿಭೆಯನ್ನು ಗುರುತಿಸಿತು.

1992ರಲ್ಲಿ ಕರ್ನಾಟಕ ಲೇಖಕಿಯರ ಸಂಘವು ಅನುಷ್ಠಾನಕ್ಕೆ ತಂದ 'ಅನುಪಮಾ ಪ್ರಶಸ್ತಿ'ಯನ್ನು ಮೊದಲ ಬಾರಿಗೆ ಶ್ರೀಮತಿ ಎಚ್.ವಿ. ಸಾವಿತ್ರಮ್ಮನವರು ಪಡೆದರು. ಈ ಪ್ರಶಸ್ತಿ ಬಂದ ನಂತರ ಎಚ್.ವಿ. ಸಾವಿತ್ರಮ್ಮನವರ ಓದುಗರ ಬಳಗ ವಿಸ್ತರಿಸಿತು ಮತ್ತು ಅವರು ವಿಮರ್ಶಕರ ಗಮನ ಸೆಳೆದರು. ಸಣ್ಣಕತೆಗಳ ಇತಿಹಾಸದಲ್ಲಿ ಭದ್ರವಾದ ನೆಲೆಯೊಂದು ಇವರಿಗೆ ಸಿಕ್ಕಿತು. 'ಅನುಪಮಾ ಪ್ರಶಸ್ತಿ ವಿಜೇತೆ'ಯಾದ ಸಾವಿತ್ರಮ್ಮನವರನ್ನು 'ಅಚಲ' ಪತ್ರಿಕೆಗೆ ಸಂದರ್ಶಿಸಲು ಸುಮಿತ್ರಾ ಮತ್ತು ನಾನು ಹೋಗಿದ್ದೆವು. ಆ ಸಂದರ್ಶನದಲ್ಲಿ ಅವರು ತಮ್ಮ ಅನಿಸಿಕೆಗಳನ್ನು, ವಿಚಾರಗಳನ್ನು ನಮ್ಮೊಡನೆ ಹಂಚಿಕೊಂಡರು. ಈ ಸಂದರ್ಶನದಲ್ಲಿ ನಮ್ಮೆಲ್ಲ ಪ್ರಶ್ನೆಗಳಿಗೆ ಉತ್ತರ ಸಿಕ್ಕಿತೋ ಇಲ್ಲವೋ ಗೊತ್ತಿಲ್ಲ, ಆದರೆ ಸಾವಿತ್ರಮ್ಮ ನಮಗೆ ತುಂಬ ಹತ್ತಿರವಾದರು. 'ಸಂದರ್ಶನ'ದ ಬಿಗಿ ಚೌಕಟ್ಟಿನಲ್ಲಿ ಉತ್ತರಗಳನ್ನು ತಡೆಹಿಡಿದು ಉತ್ತರಿಸುತ್ತಿದ್ದುದು ನಿಜವಾದರೂ ಈ ಮೌನಗೌರಿ ಮಾತಾಡಲು ಆರಂಭಿಸಿದರೆ ಏನೆಲ್ಲ

ವಿಷಯಗಳ ಬಗೆಗೆ ಮಾತನಾಡಬಹುದು ಎಂಬುದು ನಂತರದ ದಿನಗಳಲ್ಲಿ ಅವರ ಭೇಟಿಯ ಸಮಯದಲ್ಲಿ ತಿಳಿದುಬಂತು.

ಸಾವಿತ್ರಮ್ಮ ತಮ್ಮ ಸೃಜನಶೀಲ ಕೃತಿಗಳಲ್ಲಿ ತಮ್ಮ ಕಾಲದ ಚಿಂತನೆಗಳಿಗಿಂತ ಬಹಳ ಮುಂದಿದ್ದರು. ಮರುಮದುವೆ, ಸುಪ್ತಬಯಕೆಯಂತಹ ಕಥೆಗಳು ಇವಕ್ಕೆ ಸಾಕ್ಷಿ. ಹಾಗೆಯೇ ಅವರ 'ಸೀತೆ, ರಾಮ, ರಾವಣ' ಮತ್ತು 'ವಿಮುಕ್ತಿ' ಕಾದಂಬರಿಗಳಲ್ಲೂ ಮೊಟ್ಟಮೊದಲಿಗೆ ಪಿತೃಪ್ರಧಾನ ವ್ಯವಸ್ಥೆಯ ನೂರಾರು ಒಳಸುಳಿಯ ರಾಜಕೀಯ ತಂತ್ರಗಳನ್ನು ಆ ಕಾದಂಬರಿಯ ಸ್ತ್ರೀ ಪಾತ್ರಗಳ ಅನುಭವಗಳ ಮೂಲಕ ವಿಶ್ಲೇಷಿಸಿದುದು ಕನ್ನಡದಲ್ಲಿ ವಿಶೇಷ ಪ್ರಯೋಗವಾಗಿತ್ತು. ಇಂತಹ ಸಾವಿತ್ರಮ್ಮನವರೊಡನೆ ಹರಟೆ ಹೊಡೆಯುವುದು ಒಂದು ಖುಷಿಯ್ಯ ವಿವೇಚನೆಯ ಕ್ರಿಯೆಯಾಗಿತ್ತು. ಅವರಿಗೆ ನಮ್ಮೊಡನೆ ಮಾತನಾಡುವಾಗ ಯಾವ ವಯಸ್ಸಿನ ಅಂತರವೂ ಗೋಚರವಾಗುತ್ತಿರಲಿಲ್ಲ. ನಮ್ಮೊಡನೆ ಅವರು ಮಾತನಾಡದ ವಿಷಯವೇ ಇಲ್ಲ. ವಿವಾಹ ಸಂಸ್ಥೆಯ ಔಚಿತ್ಯದ ಬಗ್ಗೆ, ಅಂತರ್ಜಾತೀಯ ವಿವಾಹದ ಬಗ್ಗೆ, ಮಹಿಳಾ ಸ್ವಾತಂತ್ರ್ಯ, ಕೊನೆಗೆ ಸಮಕಾಲೀನ ರಾಜಕೀಯದ – ರಾಮ ಜನ್ಮಭೂಮಿ ಪ್ರಕರಣದ ಬಗ್ಗೆ ಬೆರಗುಬೀಳಿಸುವಂತೆ ಮುಕ್ತವಾಗಿ ಹರಟುತ್ತಿದ್ದರು. ಆ ಹರಟೆಯಲ್ಲೂ ಸಮಕಾಲೀನ ವ್ಯಕ್ತಿಗಳ ಬಗೆಗೆ ಒಂದೇ ಒಂದು ನಂಜಿನ ಮಾತಿಲ್ಲ. ತಮಗಿಷ್ಟವಿಲ್ಲದ ಮಾತಿನ ಬಗ್ಗೆ ಮೌನ, ಇಲ್ಲವೇ ವಿಷಯಾಂತರ ಅವರ ಸ್ವಭಾವವಾಗಿತ್ತು. ನಮ್ಮ ಹರಟೆಯಲ್ಲಿ ಅವರ ಹೆಣ್ಣುಮಕ್ಕಳೂ ಸೇರಿದಾಗ ಅವರ ಕತೆಗಳ ಭಾವನಾ ಪ್ರಪಂಚದ ಒಂದೊಂದು ತುಣುಕು ಮೆಲ್ಲಗೆ ಗೋಚರವಾಗತೊಡಗುತ್ತಿದ್ದವು.

ಕನ್ನಡದ ಸಂದರ್ಭದಲ್ಲಿ ಸಾಮಾನ್ಯಾತಿಸಾಮಾನ್ಯ ಮಹಿಳೆಯರಾದ ದಮಯಂತಿ, ರಮಾ, ಮೇನಕಾರಂತಹ ಪ್ರಬಲ ಸ್ತ್ರೀ ಶಕ್ತಿಗಳನ್ನು ಚಿತ್ರಿಸಿದ ಸಾವಿತ್ರಮ್ಮನವರ ಲೇಖನಿಯ ಪ್ರೌಢತೆ ದಂಗುಬಡಿಸುತ್ತದೆ.

ಇಂತಹ ಪ್ರಮುಖ ಲೇಖಕಿಯೊಬ್ಬರ ಕೃತಿಗಳ ವಿಮರ್ಶೆ ಸಾಕಷ್ಟು ನಡೆದಿಲ್ಲ ಎಂಬ ಕೊರಗಿನೊಂದಿಗೆ, ನಡೆಯಬೇಕು ಎಂಬ ಹಂಬಲವೂ ಜೊತೆಗೂಡಿತು. ನಮ್ಮ ಜಾಗೃತಿ ಮಹಿಳಾ ಅಧ್ಯಯನ ಕೇಂದ್ರವು ಕರ್ನಾಟಕ ಲೇಖಕಿಯರ ಸಂಘದ ಸಹಯೋಗದೊಂದಿಗೆ ವಿಚಾರ ಸಂಕಿರಣವನ್ನು ಹಮ್ಮಿಕೊಳ್ಳಬೇಕೆಂದು ನಿರ್ಧರಿಸಿತು. ಇದರ ಪೂರ್ವಸಿದ್ಧತೆಯ ಸಂದರ್ಭದಲ್ಲಿ ಎಚ್.ವಿ. ಸಾವಿತ್ರಮ್ಮನವರ ಕೆಲವು ಪುಸ್ತಕಗಳನ್ನು ಪಡೆಯಲು ಅವರನ್ನು ಕಾಣಬೇಕಿತ್ತು. ವೇದಿಕೆಯ ಮೇಲೆ ಹಲವಾರು ಬಾರಿ ಸಾವಿತ್ರಮ್ಮನವರನ್ನು ಕಂಡಿದ್ದೆನಾದರೂ, ಮುಖತಃ ಭೇಟಿಯಾಗುವ ಅವಕಾಶ ಸಿಕ್ಕಿದ್ದು ಹೀಗೆ.

ಅವರ ಭೇಟಿಗೆ ಮುಂಚೆಯೇ ಅವರ ಕೆಲವು ವಿಷಯಗಳ ಬಗ್ಗೆ ಪೂರ್ವಾಗ್ರಹ ಹೊಂದಿದ್ದೆ. ಆ ವೇಳೆಗಾಗಲೇ ಅವರನ್ನು ಕುರಿತು ಪ್ರಕಟವಾಗಿದ್ದ ಸಂದರ್ಶನಗಳಿಂದ ಅವರೊಬ್ಬ ಮಿತಭಾಷಿ, ಶ್ರೀಮಂತಿಕೆ ನೇಪಥ್ಯದಲ್ಲಿದ್ದು ಕತೆ ಬರೆಯುವ ಇವರು ಸಂಘಜೀವಿಯಲ್ಲ, ಮುಕ್ತವಾಗಿ ಮಾತನಾಡಬಯಸುವುದಿಲ್ಲ, ಎಂದೆಲ್ಲ ಅಭಿಪ್ರಾಯಗಳನ್ನು ನನ್ನ ತಲೆಯಲ್ಲಿ ಹೊತ್ತು ಸಾವಿತ್ರಮ್ಮನವರನ್ನು ಭೇಟಿಯಾದೆ. ಆಗ ಮಧ್ಯಾಹ್ನದ ಹೊತ್ತು; ಶ್ರೀಮಂತಿಕೆಯನ್ನು ಹೊರಸೂಸುವ ಭವ್ಯ ಬಂಗಲೆಯಲ್ಲಿ ಒಳಗೆ ಹೋಗಲು ಸ್ವಲ್ಪ ಅಳುಕು. ಊಟ ಮಾಡುತ್ತಾ ಕುಳಿತಿದ್ದ ಅವರು ಎದ್ದುಬಂದು ಕೂಡಲು ಹೇಳಿದರು. ನಂತರ ಬಂದ ಉದ್ದೇಶವನ್ನು ಕೇಳಿ, ನನ್ನ ಪರಿಚಯ ಮಾಡಿಕೊಳ್ಳುತ್ತಾ, ತೀರ ಹತ್ತಿರದ ಸ್ನೇಹಿತೆಯಂತೆ ವರ್ತಿಸಿದರು. ನನ್ನೆಲ್ಲ ಸಂಕೋಚಗಳು ಕ್ಷಣಾರ್ಧದಲ್ಲಿ ಕಳಚಿ ಅಜ್ಜಿಯೊಡನೆ ಮಾತನಾಡುತ್ತಿರುವ ಭಾವನೆ ನನ್ನಲ್ಲಿ ಹುಟ್ಟಿತು.

ವಿಚಾರ ಸಂಕಿರಣದ ದಿನ ಅವರು ಸಭೆಗೆ ಬಂದು, ಮುಗಿಯುವವರೆಗೂ ಕುಳಿತಿದ್ದು, ತಮ್ಮ ಕೃತಿಗಳ ವಿಮರ್ಶೆಯನ್ನು ಗಮನವಿಟ್ಟು ಕೇಳಿದರು. ಈ ವೇಳೆಗಾಗಲೇ ಅವರು ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಸೋವಿಯತ್ ಲ್ಯಾಂಡ್ ನೆಹರೂ ಪ್ರಶಸ್ತಿಯನ್ನು ಗಳಿಸಿದ್ದರಾದರೂ ಈ ಯಾವ ಪ್ರಶಸ್ತಿಯೂ ಕೊಡದಂತಹ ಸಂತೋಷವನ್ನು, ಸಮಾಧಾನವನ್ನು ಈ ವಿಚಾರ ಸಂಕಿರಣ ಅವರಿಗೆ ಉಂಟುಮಾಡಿತೆಂದು ತಿಳಿಸಿದರು.

'ಅನುಪಮಾ ಪ್ರಶಸ್ತಿ' ಸಾವಿತ್ರಮ್ಮನವರಿಗೆ ಸಂದ ನಂತರ ಹಲವಾರು ಪ್ರಶಸ್ತಿಗಳು ಅವರನ್ನು ಅರಸಿಕೊಂಡು ಬಂದವು. ದೇ.ಜ.ಗೌ. ಪ್ರತಿಷ್ಠಾನದ ಸಾವಿತ್ರಮ್ಮ ದತ್ತಿನಿಧಿ ಪ್ರಶಸ್ತಿ, ಚಂದ್ರಕಲಾ ಪ್ರತಿಷ್ಠಾನದ 'ಲಿಪಿಪ್ರಾಜ್ಞೆ' ಪ್ರಶಸ್ತಿ ಮತ್ತು ಸಮ್ಮೇಳನಗಳ ಸನ್ಮಾನಗಳು ಅವರನ್ನರಸಿ ಬಂದವು. ಆದರೆ ಇವು ಯಾವುದಕ್ಕೂ ಅವರು ಹಿಗ್ಗಲಿಲ್ಲ. ಕರ್ನಾಟಕ ಲೇಖಕಿಯರ ಸಂಘ ಮತ್ತು ಜಾಗೃತಿಯೊಂದಿಗೆ ಅವರು ಬೆಳೆಸಿಕೊಂಡ ಸ್ನೇಹ ಅವರನ್ನು ಹೆಚ್ಚು ಬಹಿರ್ಮುಖಿಗೊಳಿಸಿತು ಮತ್ತು ತಮ್ಮ ಸುತ್ತಮುತ್ತಲಿನ ವಿದ್ಯಮಾನಗಳಿಗೆ ಸ್ಪಂದಿಸುವಂತೆ ಮಾಡಿತು; ಸಾಹಿತ್ಯ ರಚನೆಯಲ್ಲಿ ತೊಡಗುವಂತೆ ಮಾಡಿತು.

ಒಂದು ವರ್ಷದ ಹಿಂದಷ್ಟೇ ಅವರಿಗೆ ಆಗಿದ್ದ ಹೃದಯಾಘಾತದ ನೋವನ್ನು ದಿಟ್ಟವಾಗಿ ಎದುರಿಸಿ, ಏನೂ ಆಗದವರಂತೆ ಸಹಜವಾಗಿ ಬದುಕು ಸ್ವೀಕರಿಸಿದ್ದರು. ನಿತ್ಯ ವಾಕಿಂಗ್ ತಪ್ಪಿಸಲಿಲ್ಲ. ಕಡೆಗಳಿಗೆಯವರೆಗೂ ಬೌದ್ಧಿಕ ಚಟುವಟಿಕೆಯಲ್ಲಿ ತೊಡಗಿಕೊಂಡಿದ್ದರು. ಕೊನೆಯ ಒಂದು ವಾರದ ಹಿಂದಷ್ಟೇ ಚಾರ್ಲ್ಸ್ ಡಿಕನ್ಸ್‌ನ 'ಡಾಂಬಿ ಅಂಡ್ ಸನ್'ನ ಕನ್ನಡ ಅನುವಾದವನ್ನು ಪೂರ್ಣಗೊಳಿಸಿದ್ದರು. ಯಾವ ಪದವಿ, ಪ್ರಶಸ್ತಿಗಳಿಗೂ ತಮ್ಮ ಜೀವಿತದ ಕಾಲದಲ್ಲಿ ಆಶಿಸದೆ, ಒಂದು ದಿನವೂ ನರಳದೆ ಕೊನೆಯುಸಿರೆಳೆದರು. ಮಹಿಳೆಯ ಸ್ವಾಭಿಮಾನದ, ಸ್ವಸಮರ್ಥನೆಯ ಗಟ್ಟಿದನಿಯೊಂದನ್ನು ತಮ್ಮ ಸೃಜನಶೀಲಕೃತಿಗಳ ಮೂಲಕ ಅಭಿವ್ಯಕ್ತಿಸಿದ ಸ್ತ್ರೀ ಪರ ಜ್ಯೋತಿಯೊಂದು ತಣ್ಣಗಾಯಿತು.

# ನಿರ್ಭೀತ ನಾಡಿಯಾ

- ಚಂದ್ರ

ತೊಂಭತ್ತರ ದಶಕದಲ್ಲೂ ನಮ್ಮ ಚಲನಚಿತ್ರಗಳು ಗಂಡನಿಂದ ಒದೆಸಿಕೊಂಡರೂ ಪತಿ ಪರಮೇಶ್ವರನೆಂದು ಕಾಲು ಒತ್ತಿ, ಕಣ್ಣೀರು ಹಾಕಿ ತಾಳಿ ಕಣ್ಣಿಗೆ ಒತ್ತಿಕೊಳ್ಳುವ ಅಳುಮುಂಜಿ ಹೆಂಗಸರನ್ನೇ ಮತ್ತೆ ಮತ್ತೆ ಎತ್ತಿ ತೋರಿಸುತ್ತವೆ. ಕೇವಲ ಅಲಂಕಾರಪ್ರಾಯವಾಗಿ ನಿಂತು, ತನ್ನ ಮಾನ ಪ್ರಾಣ ಉಳಿಸಲು ಬರುವ ಧೀರ ನಾಯಕನಿಗಾಗಿ ಕಾದ ಚಲನಚಿತ್ರದ ಭಯಭೀತ ಹೆಣ್ಣುಗಳು ಬಹುಶಃ ಮೂವತ್ತರ ದಶಕದಲ್ಲೇ 'ನಿರ್ಭೀತ ಹೆಣ್ಣಾಗಿ' ಹೆಣ್ಣಿನ ಧೈರ್ಯ, ಸಾಹಸದ ಪ್ರತಿಮೆಯನ್ನು ನಿಲ್ಲಿಸಿದ್ದ ನಾಡಿಯಾಳನ್ನು ಪೂರ್ಣ ಮರೆತೇ ಬಿಟ್ಟಿದ್ದಾರೆ.

1910ರಲ್ಲಿ ಹುಟ್ಟಿದ ನಾಡಿಯಾ 1935ರಲ್ಲಿ 'ಹಂಟರ್‌ವಾಲಿ' ಚಿತ್ರದ ಮೂಲಕ ಹೆಣ್ಣಿನ ದಿಟ್ಟ ಸ್ವರೂಪದ ಮರೆಯಲಾರದ ಚಿತ್ರವನ್ನು ಕಣ್ಣಿಗೆ ಕಟ್ಟಿದರು. ಚಲನಚಿತ್ರದಲ್ಲಿ ಆಸಕ್ತರಾದ ಜೆ.ಬಿ.ಎಚ್. ವಾಡಿಯಾ ಮತ್ತು ಹೋಮಿ ವಾಡಿಯಾ ಸಹೋದರರು ತಮ್ಮ ಯಶಸ್ವೀ ಉದ್ಯೋಗವನ್ನು ಬಿಟ್ಟು, ಚಲನಚಿತ್ರ ತಯಾರಿಕೆಗೆ ಕೈಹಾಕಿದ್ದರು. ತನ್ನ ಮೇಲಿನ ಎಲ್ಲಾ ಶೋಷಣೆಯನ್ನೂ ಸಹಿಸಿ ವಿಧೇಯಳಾಗಿ ಒಪ್ಪಿಸಿಕೊಳ್ಳುವ ಭಾರತೀಯ ಹೆಣ್ಣಿನ ಪಾತ್ರ ಜೆ.ಬಿ.ಎಚ್. ವಾಡಿಯಾರವರಿಗೆ ಎಂದೂ ಅರ್ಥವಾಗಿರಲಿಲ್ಲ. ಅವರ ಚಿತ್ರಗಳಲ್ಲಿ ಹೆಣ್ಣು ಅಳುಮುಂಜಿ ಪಾತ್ರವಾಗದೆ 'ನಿರ್ಭೀತ ನಾಡಿಯಾ'ಳ ರೂಪದಲ್ಲಿ ದಿಟ್ಟ ಹೋರಾಟಗಾರ್ತಿಯಾಗಿ ಮೂಡಿಬಂದಳು. ನಾಡಿಯಾರ ಸಾಹಸಗಳು ಮೈ ಜುಮ್ಮೆನಿಸುವಂಥಹವು. ವೇಗದ ಕುದುರೆ ಸವಾರಿ, ಕತ್ತಿ ವರಸೆ, ಓಡುವ ರೈಲಿನ ಮೇಲೆ ಹೋರಾಟ, ತಾರಸಿಯ ಮೇಲೆ ನಿಂತು ಮುಗಿಬಿದ್ದ ಹತ್ತಾರು ಗಂಡಸರನ್ನು ಹಿಡಿದು ಚಚ್ಚುವ ಬಗೆ, ಅನಾಮತ್ತಾಗಿ ಗಂಡಸರನ್ನು ಎತ್ತಿ ಗಿರಗಿರ ತಿರುಗಿಸಿ ಎಸೆಯುವ ದೃಶ್ಯ. ಬಹುಶಃ ಆಕೆ ಸ್ವತಃ ಮಾಡಿದ ಸಾಹಸಗಳನ್ನು ಇಂದಿನ ಸಿನೆಮಾ ನಾಯಕರು ಮಾಡಲು ಹೆದರಿಯಾರು. ಹೆಣ್ಣಿನ ಧೈರ್ಯ, ಸಾಹಸ, ಶಕ್ತಿಗಳ ಅದ್ಭುತ ರೂಪವಾಗಿ ನಾಡಿಯಾ ತನ್ನ ಚಿತ್ರಗಳಲ್ಲಿ ಕಾಣಿಸಿಕೊಂಡರು. ಇಂದು ನಮ್ಮ ಚಲನಚಿತ್ರಗಳಲ್ಲಿ ಅನ್ಯಾಯದ ವಿರುದ್ಧ ಹೋರಾಡುವ ಗುತ್ತಿಗೆಯನ್ನು ನಾಯಕರು ತೆಗೆದುಕೊಂಡಂತಿದೆ. ಆದರೆ 1935ರ ಈ 'ಹಂಟರ್‌ವಾಲಿ' ಚಿತ್ರದಲ್ಲಿ ತನ್ನ ತಂದೆಗಾದ ಅನ್ಯಾಯದ ವಿರುದ್ಧ ಹೋರಾಡಲು ಚಾಟಿ ಹಿಡಿದು ನಿಂತ ನಾಡಿಯಾ ಎಷ್ಟು ಪ್ರಸಿದ್ಧರಾದರು ಎಂದರೆ, 'ಹಂಟರ್‌ವಾಲಿ' ಒಂದು ಕ್ರೇಸ್ ಆಗಿ, ಮಾರುಕಟ್ಟೆಗೆ ಬಂದ ಪ್ರತಿ ಸಾಮಾನೂ ಹಂಟರ್‌ವಾಲಿ ಹೆಸರು ಅಂಟಿಸಿಕೊಂಡು ಬಂದಿತ್ತು.

ಭಾರೀ ಹಣ ತೊಡಗಿಸಿ ತಯಾರಿಸಿದ 1936ರ 'ಮಿಸ್ ಫ್ರಾಂಟಿಯರ್ ಮೇಲ್'ನಲ್ಲಿ ನಾಡಿಯಾ ಓಡುವ ರೈಲಿನ ತಾರಸಿಯ ಮೇಲೆ ಓಡುತ್ತಾ ಮುಗಿಬಿದ್ದ ಗಂಡಸರೊಡನೆ ಗುದ್ದಾಡಿದ್ದರು. ಯಾವ ಡೂಪ್ಲಿಕೇಟ್ ಇಲ್ಲದೆ ಸ್ವತಃ ಸಾಹಸಗಳನ್ನು ಮಾಡುತ್ತಿದ್ದ ಕಾಲದಲ್ಲಿ ಅನೇಕ ಅಪಘಾತಗಳಿಗೆ ಈಡಾದರೂ ಮೂವತ್ತು ವರ್ಷಗಳ ಕಾಲ ನಿರ್ಭೀತಳಾಗಿ ಚಿತ್ರಗಳಲ್ಲಿ ದುಡಿದ ಕೀರ್ತಿ ನಾಡಿಯಾರವರದು.

ದೇಶದ ಸ್ವಾತಂತ್ರ್ಯ ಚಳುವಳಿಯಲ್ಲಿ ನಿಕಟವಾಗಿ ಬೆರೆತ ವಾಡಿಯಾ ಸಹೋದರರಿಗೆ ಚಲನಚಿತ್ರ ಕೇವಲ ಮನೋರಂಜನೆಯ ಮಾಧ್ಯಮವಾಗಿರಲಿಲ್ಲ, ತಮ್ಮ ನಂಬಿಕೆಗಳನ್ನು ಪ್ರತಿಬಿಂಬಿಸುವ ಮಾರ್ಗವೂ ಆಗಿತ್ತು. ಅವರ ಅನೇಕ ಚಿತ್ರಗಳಲ್ಲಿ ನಾಡಿಯಾ ಹೋರಾಟದ ಹೆಣ್ಣಾಗಿ ನಿಂತರು. 'ಲುಟಾರು ಲಲನಾ'ದಲ್ಲಿ ಹಿಂದೂ ಮುಸ್ಲಿಮ್ ಐಕ್ಯತೆಗಾಗಿ ಹೋರಾಡಿದ ಮಹಿಳೆಯಾದರೆ, 1941ರಲ್ಲಿ ತಯಾರಾದ 'ಬೊಂಬಯಿವಾಲಿ' ಚಿತ್ರದಲ್ಲಿ ಪುರುಷಪ್ರಧಾನ ಸಮಾಜದ ವಿರುದ್ಧ ದಂಗೆ ಏಳುವಂತೆ ಹಳ್ಳಿಯ ಮಹಿಳೆಯರನ್ನು ಸ್ವಾತಂತ್ರ್ಯಕ್ಕಾಗಿ ಪ್ರಚೋದಿಸುವ ಹೆಣ್ಣಾಗಿ ಕಾಣಿಸಿಕೊಂಡರು. 1942ರಲ್ಲಿ ತಯಾರಾದ 'ಮುಕಾಬ್ಲಾ' ಚಿತ್ರದಲ್ಲಿ ನಾಡಿಯಾ ದ್ವಿಪಾತ್ರದಲ್ಲಿ ಅಭಿನಯಿಸಿದ್ದರು. ಅಂಥಾ ತಾಂತ್ರಿಕತೆಯನ್ನು ಅಳವಡಿಸಿದ ಮೊದಲ ಭಾರತೀಯ ಚಿತ್ರವಿದು. 1942ರಲ್ಲಿ ತಯಾರಾದ 'ಜಂಗಲ್ ಪ್ರಿನ್ಸೆಸ್' ಚಿತ್ರದಲ್ಲಿ ನಾಡಿಯಾ ಸಿಂಹಳೊಡನೆ ಸಲೀಸಾಗಿ ಅಭಿನಯಿಸಿದರು. ಅವುಗಳಿಗೆ ಬೆಕ್ಕಿನ ಮರಿಗಳೆಂಬಂತೆ ಹಾಲು ಕುಡಿಸಿ, ತಲೆ ಸವರಿ, ಅವುಗಳೊಡನೆ ಮಲಗಿ, ಅವುಗಳೊಡನೆ ಆಟವಾಡಿ, ಸಿಂಹಗಳನ್ನು ಪಳಗಿಸಿದ ಈ 'ಸಿಂಹಿಣಿ' ಮುಂದೆ 'ಟೈಗ್ರೆಸ್' ಎಂಬ ಚಿತ್ರದಲ್ಲೂ ಕಾಣಿಸಿಕೊಂಡರು. 1943ರಲ್ಲಿ 'ಹಂಟರ್‌ವಾಲಿ ಕಿ ಬೇಟಿ' ಚಿತ್ರದಲ್ಲಿ ಮತ್ತೆ ತಮ್ಮ 'ಹಂಟರ್‌ವಾಲಿ'ಯ ಮಾಂತ್ರಿಕ ದಿನಗಳನ್ನು ಪುನಃ ಸೃಷ್ಟಿಸಿ ಭಾರೀ ಯಶಸ್ವಿ ಚಿತ್ರವನ್ನು ನೀಡಿದ ನಾಡಿಯ, 'ಹೆಣ್ಣು ಅಶಕ್ತಳಲ್ಲ' ಎಂದು ಕೂಗಿದ ತಮ್ಮ ಪಾತ್ರಗಳ ಜೀವಂತ ಉದಾಹರಣೆಯಂತಿದ್ದರು. 1961ರಲ್ಲಿ ಹೋಮಿ ವಾಡಿಯಾರನ್ನು ವಿವಾಹವಾದ ನಾಡಿಯಾ, ವಿವಾಹದ ನಂತರವೂ 1966ರಲ್ಲಿ 'ಕಿಲಾಡಿ' ಚಿತ್ರದ ಮೂಲಕ ಕಾಣಿಸಿಕೊಂಡರು. ಮೂರು ದಶಕಗಳ ತಮ್ಮ ಚಲನಚಿತ್ರ ವೃತ್ತಿಯಲ್ಲಿ ಭಾರತದ ಚಲನಚಿತ್ರಗಳಲ್ಲಿ ದಿಟ್ಟ ಸ್ತ್ರೀ ಪಾತ್ರಗಳನ್ನು ನೀಡಿ ಮಿನುಗಿದ ತಾರೆ ನಾಡಿಯಾ, ಈ ವರ್ಷದ ಜನವರಿ ತಿಂಗಳಿನಲ್ಲಿ ತೀರಿಕೊಂಡರು. ಶಕ್ತಿಶಾಲಿ ಹೆಣ್ಣಿನ ಚಿತ್ರವಾಗಿ ನಿಂತ ನಾಡಿಯಾರವರ ಮರಣಕ್ಕೆ 'ಅಚಲ' ಕಂಬನಿ ಮಿಡಿಯುತ್ತದೆ.

★ ★ ★ ★

## ೧೯೮೫-೯೫ ರ ದಶಕದಲ್ಲಿ 'ಅಚಲ'ದ ಕೆಲವು ಪ್ರಮುಖ ಲೇಖನಗಳು:

1. ಕೃಷಿ ಮಹಿಳೆಯ ಶೋಧನೆಯೇ? - ದೇವಿಪ್ರಸಾದ ಚಟ್ಟೋಪಾಧ್ಯಾಯ ಸಂಗ್ರಹಾನುವಾದ: ಎನ್. ಗಾಯತ್ರಿ (ಸಂಚಿಕೆ ೧, ಮಾರ್ಚ್ ೧೯೮೫)
2. ಶ್ರೀಮತಿ ಗಂಗೋತ್ರಿ (ವ್ಯಕ್ತಿ ವಿಶೇಷ) - ಡಾ. ಜಿ. ರಾಮಕೃಷ್ಣ (ಸಂ. ೧, ಮಾರ್ಚ್, ೧೯೮೫)
3. ಮಹಿಳೆಯ ಅಸ್ತಿತ್ವವನ್ನೇ ಪ್ರಶ್ನಿಸುವ ಮತೀಯ ಕಾನೂನುಗಳು - ಹೇಮಲತಾ ಮಹಿಷಿ (ಸಂ. ೧, ಮಾರ್ಚ್, ೧೯೮೫)
4. ಮಹಿಳಾ ವಿಮೋಚನೆಗೆ ಜಿಹಾದ್ (ಮುಸ್ಲಿಂ ಮಹಿಳೆಯರ ವಿಮೋಚನೆಗಾಗಿ ಆಕೆ ಸುಪ್ರೀಂ ಕೋರ್ಟಿನಲ್ಲಿ ಸಲ್ಲಿಸಿದ್ದ ಅರ್ಜಿಯ ಸಂಗ್ರಹಾನುವಾದ). - ಷಹನಾಜ್ ಶೇಖ್ (ಸಂ. ೧, ಮಾರ್ಚ್, ೧೯೮೫)
5. ಉದ್ಯೋಗಸ್ಥ ಮಹಿಳೆ; ಬದಲಾವಣೆ ಅಗತ್ಯ - ನೇಮಿಚಂದ್ರ (ಸಂ. ೨, ಮೇ, ೧೯೮೫)
6. 'ಕನ್ಯತ್ವ'ಕ್ಕೆ ಪರದಾಟ - ಡಾ. ಅನುಪಮಾ ನಿರಂಜನ (ಸಂ. ೨, ಮೇ, ೧೯೮೫)
7. ನಾಜಿ ವಿರೋಧಿ ಹೋರಾಟಗಾರ್ತಿ ನೂರಿ - ಆಶಾ (ಸಂ. ೨, ಮೇ, ೧೯೮೫)
8. ಅಂಗನವಾಡಿ ಅಂಗಳದಲ್ಲಿ (ದುಡಿಯುವ ಮಹಿಳೆ) - ಭಾರತಿ (ಸಂ. ೨, ಮೇ, ೧೯೮೫)
9. ತತ್ತರಿಸುತ್ತಿರುವ ತರಕಾರಿ ಹೆಣ್ಣು - ಎಲ್.ಎನ್. ಶ್ಯಾಮಲಾದೇವಿ (ಸಂ. ೩, ಜುಲೈ, ೧೯೮೫)
10. ಕೃಷಿದೇವತೆ ಗೌರಿ - ಕೆ. ಗೌರಿ (ಸಂ. ೪, ಸೆಪ್ಟೆಂಬರ್, ೧೯೮೫)
11. ಹೊಂದಾಣಿಕೆಯ ಸೂತ್ರಹಿಡಿದ ದುಡಿಯುವ ಮಹಿಳೆ - ಭಾರತಿ (ಸಂ. ೪, ಸೆಪ್ಟೆಂಬರ್, ೧೯೮೫)
12. ಪ್ರಾಚೀನ ಕಾಲದಲ್ಲಿ ಸ್ತ್ರೀ ಮಾಂತ್ರಿಕರು - ಎಸ್.ಆರ್. ಭಟ್ (ಸಂ. ೫, ನವೆಂಬರ್, ೧೯೮೫)
13. ಬೆಂಗಳೂರಿನ ಕರಗ (ಸಂಗ್ರಹ) - ಡಿ.ಡಿ. ಕೋಸಾಂಬಿ (ಸಂ. ೫, ನವೆಂಬರ್, ೧೯೮೫)
14. ಗಾರ್ಕಿಯ ತಾಯಿಯ ಪ್ರತಿರೂಪಗಳು - ಜಿ.ಆರ್. (ಸಂ. ೫, ನವೆಂಬರ್, ೧೯೮೫)
15. ಮಹಿಳೆಯನ್ನು ಕುರಿತು ಗಾಂಧೀಜಿ - ಆಶಾ (ಸಂ. ೬, ಜನವರಿ, ೧೯೮೬)
16. ವಿಜ್ಞಾನರಂಗದಲ್ಲಿ ಮಹಿಳೆ - ನೇಮಿಚಂದ್ರ (ಸಂ. ೬, ಜನವರಿ, ೧೯೮೬)
17. ಮನೆ 'ಬೆಳಗು'ವವರು - ಭಾರತಿ (ಸಂ. ೬, ಜನವರಿ, ೧೯೮೬)
18. ಚಿತ್ರರಂಗ ಮತ್ತು ಹೆಣ್ಣು - ಗಂಗಾಧರ ಮೊದಲಿಯಾರ್ (ಸಂ. ೬, ಜನವರಿ, ೧೯೮೬)
19. ಹೆಣ್ಣಾಗಿ ಹುಟ್ಟಿದಳು ಆಯಿಷಾ - ಸಾರಾ ಅಬೂಬಕ್ಕರ್ (ಸಂ. ೭, ಮಾರ್ಚ್, ೧೯೮೬)
20. ವೇದಕಾಲದಲ್ಲಿ ಸ್ತ್ರೀಯರ ಸ್ಥಾನ - ಡಿ.ಆರ್. ರಾಮರಾವ್ (ಸಂ. ೭, ಮಾರ್ಚ್, ೧೯೮೬)
21. ಪ್ರಾಚೀನ ಭಾರತದಲ್ಲಿ ಮಹಿಳೆ - ಒಂದು ಟಿಪ್ಪಣಿ - ಡಾ. ಜಿ. ರಾಮಕೃಷ್ಣ (ಸಂ. ೭, ಮಾರ್ಚ್, ೧೯೮೬)
22. ಕಾಳಗ ಕೊನೆಗೊಂಡಿಲ್ಲ - ರಮಜಾನ ದರ್ಗಾ (ಸಂ. ೭, ಮಾರ್ಚ್, ೧೯೮೬)
23. ಸಿನಿಮಾರಂಗದಲ್ಲಿ ಹೆಣ್ಣು - ಡಾ. ವಿಜಯಾ (ಸಂ. ೭, ಮಾರ್ಚ್, ೧೯೮೬)
24. ಅಂದಿನ ನಮ್ಮೂರ ಹೆಂಗಸರು - ಕೋ.ಲ. ಕಾರಂತ (ಸಂ. ೮, ಮೇ, ೧೯೮೬)
25. 'ಸಿರಿ' ಸ್ತ್ರೀ ಹಕ್ಕುಗಳ ಹೋರಾಟದ ಆಚರಣೆಯೇ? - ಪ್ರೊ. ಕ.ವೆಂ. ರಾಜಗೋಪಾಲ (ಸಂ. ೮, ಮೇ, ೧೯೮೬)
26. ಸಮೂಹ ಮಾಧ್ಯಮಗಳು ಮತ್ತು ಮಹಿಳೆ - ಬರಗೂರು ರಾಮಚಂದ್ರಪ್ಪ (ಸಂ. ೮, ಮೇ, ೧೯೮೬)
27. ಶಾಂತಿ ಎಲ್ಲರಿಗೂ ಬೇಕು - ಡಾ. ಮಾರ್ಗರೆಟ್ ಬಿಸ್ವಾಸ್ (ಸಂ. ೮, ಮೇ, ೧೯೮೬)
28. ಕಲ್ಪನೆ ಮತ್ತು ವಾಸ್ತವತೆ - (ಸಿಮೋನ್ ದ ಬೋವ) ಸಂಗ್ರಹಾನುವಾದ (ಸಂ. ೮, ಮೇ, ೧೯೮೬)

29. ಹೋರಾಟದ ಕಣದಲ್ಲಿ ಕಪ್ಪು ಹೆಣ್ಣು – ಆಶಾ (ಸಂ. ೯, ಜುಲೈ, ೧೯೮೬)
30. ಚಿತ್ರೋದ್ಯಮದ ಗೋಮುಖ ವ್ಯಾಘ್ರಗಳು – ಶೀಲಾ (ಸಂ. ೯, ಜುಲೈ, ೧೯೮೬)
31. ಮಹಿಳಾ ದಶಕದಲ್ಲಿ ವಿದ್ಯಾಭ್ಯಾಸ – ಟಿ.ಪಿ. ಸಂಧ್ಯಾ (ಸಂ. ೯, ಜುಲೈ, ೧೯೮೬)
32. ಚರಿತ್ರೆಯಲ್ಲಿ ವೃತ್ತಿಪರ ಧಾತ್ರಿಯರು – ಡಾ. ಗುರುದತ್ (ಸಂ. ೯, ಜುಲೈ, ೧೯೮೬)
33. ಮಹಿಳಾ ಹಕ್ಕುಗಳ ಪ್ರತಿಪಾದನೆ (ಮೇರಿ ವುಲ್‌ಸ್ಟನ್‌ಕ್ರಾಫ್ಟ್): ಸಂಗ್ರಹ – ಆಶಾ (ಸಂ. ೯, ಜುಲೈ, ೧೯೮೬)
34. ಹಿತೈಷಿಣಿ: ಒಂದು ನೆನಕೆ – ಡಾ. ವಿಜಯಾ ದಬ್ಬೆ (ಸಂ. ೧೦, ಫೆಬ್ರವರಿ, ೧೯೮೭)
35. ಕವಿವರ್ಯರು ಚಿತ್ರಿಸಿದ 'ಚಿತ್ರಾಂಗದೆ' – ಎನ್. ಗಾಯತ್ರಿ (ಸಂ. ೧೦, ಫೆಬ್ರವರಿ, ೧೯೮೭)
36. ವಿಜ್ಞಾನ ಮತ್ತು ಮಹಿಳೆ – ನೇಮಿಚಂದ್ರ (ಸಂ. ೧೦, ಫೆಬ್ರವರಿ, ೧೯೮೭)
37. ಯಶೋಧರಾ: ಸ್ತ್ರೀ ಸ್ವಾತಂತ್ರ್ಯ ಪ್ರತಿಪಾದನೆ – (ಮಾಸ್ತಿ ನಾಟಕ ವಿವೇಚನೆ) – ಡಾ. ಅನುಪಮಾ ನಿರಂಜನ (ಸಂ. ೧೧, ಮಾರ್ಚ್, ೧೯೮೭)
38. ಮಾನಸಿಕ ರೋಗಿಗೊಂದು ಚೇತನ ಶಕ್ತಿ – ಭಾರತಿ (ಸಂ. ೧೧, ಮಾರ್ಚ್, ೧೯೮೭)
39. ಸಾಮಾಜಿಕ ಪ್ರಜ್ಞೆಯ ಕಲ್ಯಾಣಮ್ಮ – ನೇಮಿಚಂದ್ರ (ಸಂ. ೧೨, ಮೇ, ೧೯೮೭)
40. ಪ್ರಾಚೀನ ಭಾರತದಲ್ಲಿ ವೇಶ್ಯಾವೃತ್ತಿ – ಸುಕುಮಾರಿ ಭಟ್ಟಾಚಾರ್ಜಿ (ಸಂ. ೧೩, ಸೆಪ್ಟೆಂಬರ್, ೧೯೮೭)
41. ಬದುಕು ಒಂಟೆತ್ತಿನ ಗಾಡಿ – ಭಾರತಿ (ಸಂ. ೧೩, ಸೆಪ್ಟೆಂಬರ್, ೧೯೮೭)
42. ದಕ್ಷಿಣ ಆಫ್ರಿಕಾದ ಮಹಿಳಾದಿನ – ಆಶಾ (ಸಂ. ೧೩, ಸೆಪ್ಟೆಂಬರ್, ೧೯೮೭)
43. ಮಹಿಳಾ ಸ್ವಾತಂತ್ರ್ಯಕ್ಕೆ ಕಾಯಕಲ್ಪ – ನೇಮಿಚಂದ್ರ (ಸಂ. ೧೩, ಸೆಪ್ಟೆಂಬರ್, ೧೯೮೭)
44. ಇ.ಪಿ. ಸಂಯುಕ್ತಗಳು: ಹುಟ್ಟುವ ಶಿಶುವಿಗೆ ಮಾರಕ – ಶಾರದಾ ಗೋಪಾಲ್ (ಸಂ. ೧೪, ನವೆಂಬರ್, ೧೯೮೭)
45. ಹೊನ್ನಮ್ಮನ ಕಾವ್ಯಕ್ಕೆ ಹೊಸ ಆಯಾಮ – ಡಾ. ಅನುಪಮಾ ನಿರಂಜನ (ಸಂ. ೧೪, ನವೆಂಬರ್, ೧೯೮೭)
46. ಮಹಿಳಾ ಪತ್ರಿಕೆಗಳು – ನೇಮಿಚಂದ್ರ (ಸಂ. ೧೪, ನವೆಂಬರ್, ೧೯೮೭)
47. ವನಿತಾ ಸೇವಾ ಸಮಾಜದ ರೂವಾರಿ (ಭಾಗೀರಥೀಬಾಯಿ ಪುರಾಣಿಕರ ಪರಿಚಯ) – ಆಶಾ (ಸಂ. ೧೫, ಜನವರಿ, ೧೯೮೮)
48. 'ಸತಿಪದ್ಧತಿ': ನಮ್ಮ ಮುಂದಿರುವ ಸವಾಲುಗಳು – ರೇಣು ಚಕ್ರವರ್ತಿ (ಸಂ. ೧೫, ಜನವರಿ, ೧೯೮೮)
49. ಟಿ.ವಿ. ಯ ಹೆಣ್ಣು – ಚಂದ್ರ (ಸಂ. ೧೬, ಮಾರ್ಚ್, ೧೯೮೮)
50. ಮಾಯಾತ್ಯಾಗಿ: ಕೊನೆಗೂ ದೊರೆತ ನ್ಯಾಯ – ಅಚಲ (ಸಂ. ೧೬, ಮಾರ್ಚ್, ೧೯೮೮)
51. 'ನೋರಾ'ಳ ಮೂಲ ಆಶಯ – ಎಸ್. ಮಾಲತಿ (ಸಂ. ೧೬, ಮಾರ್ಚ್, ೧೯೮೮)
52. ಉತ್ಪಾದನಾ ರಂಗದಲ್ಲಿ ಮಹಿಳೆ – ಎನ್. ಗಾಯತ್ರಿದೇವಿ (ಸಂ. ೧೭, ಜುಲೈ, ೧೯೮೮)
53. ಬಂಧನದ ಮುಸುಕು ಕಿತ್ತೆಸೆದಾಗ (ದಕ್ಷಿಣ ಆಫ್ರಿಕಾ ಮಹಿಳೆಯರ ಪ್ರತಿಭಟನೆ) – ಆಶಾ (ಸಂ. ೧೮, ಸೆಪ್ಟೆಂಬರ್, ೧೯೮೮)
54. ಅರಬ್ ಮಹಿಳೆ: ಹೊಸಪಾತ್ರಗಳಲ್ಲಿ – ಲಕ್ಷ್ಮಿ (ಸಂ. ೧೮, ಸೆಪ್ಟೆಂಬರ್, ೧೯೮೮)
55. ಮೆದುಳು ಮನೆಗೆಲಸಕ್ಕೆ ಮೀಸಲೇ? – ನೇಮಿಚಂದ್ರ (ಸಂ. ೧೯, ನವೆಂಬರ್, ೧೯೮೮)
56. ವರದಕ್ಷಿಣೆಯ ಸಮಸ್ಯೆ ಮತ್ತು ಗಾಂಧೀಜಿ – ವಿಜಯಾ ದಬ್ಬೆ (ಸಂ. ೨೦, ಜನವರಿ, ೧೯೮೯)
57. ತ್ರಿವೇಣಿ ಕೃತಿಗಳಲ್ಲಿ ಸ್ತ್ರೀತ್ವದ ವಿವೇಚನೆ – ಡಾ. ಬಿ.ಎನ್. ಸುಮಿತ್ರಾ ಬಾಯಿ (ಸಂ. ೨೦, ಜನವರಿ, ೧೯೮೯)
58. ಚಿತ್ರೋದ್ಯಮದಲ್ಲಿ ಸಮಾನತೆ – ವಿಜಯಶ್ರೀ (ಸಂ. ೨೦, ಜನವರಿ, ೧೯೮೯)

59. ಸ್ತ್ರೀ ಪ್ರತ್ಯೇಕತೆಯೆಂಬ ದೌಷ್ಟ್ಯ - ಡಾ. ಅನುಪಮಾ ನಿರಂಜನ (ಸಂ. ೨೧, ಮಾರ್ಚ್, ೧೯೮೯)

60. ಮೇರಿ ವುಲ್‌ಸ್ಟನ್‌ಕ್ರಾಫ್ಟ್ - ಒಂದು ಪರಿಚಯ - ಡಾ॥ ಜಿ. ರಾಮಕೃಷ್ಣ (ಸಂ. ೨೧, ಮಾರ್ಚ್, ೧೯೮೯)

61. ಅತ್ಯಾಚಾರಿಯ ಪತ್ತೆಗೆ ಡಿ.ಎನ್.ಎ. ಬೆರಳಚ್ಚು ತಂತ್ರ - ನೇಮಿಚಂದ್ರ (ಸಂ. ೨೧, ಮಾರ್ಚ್, ೧೯೮೯)

62. ಅಕ್ಕ: ಒಂದು ಪರಿಚಯ - ವಿಜಯಾ ದಬ್ಬೆ (ಸಂ. ೨೨, ಮೇ, ೧೯೮೯)

63. ವಿಶ್ವಸಂಸ್ಥೆಯಲ್ಲಿ ಪಕ್ಷಪಾತ - ದೇವಿ (ಸಂ. ೨೨, ಜುಲೈ, ೧೯೮೯)

64. ಎಲ್ಲಾ ಮಗಳ ಮದುವೆಗಾಗಿ - ನೇಮಿಚಂದ್ರ (ಸಂ. ೨೩, ಜುಲೈ, ೧೯೮೯)

65. ಹೆಣ್ಣಾಗ ಬಯಸದವರು - ನೇಮಿಚಂದ್ರ (ಸಂ. ೨೪, ಸೆಪ್ಟೆಂಬರ್, ೧೯೮೯)

66. ಜಾಹೀರಾತಿನಲ್ಲಿ ಹೆಣ್ಣು: ಕೆಲವು ಪ್ರಶ್ನೆಗಳು - ವಿಜಯಾ ದಬ್ಬೆ (ಸಂ. ೨೪, ಸೆಪ್ಟೆಂಬರ್, ೧೯೮೯)

67. ನಿರಾಶ್ರಿತರ ಶಿಬಿರಗಳಲ್ಲಿ ಬಲಾತ್ಕಾರಿತ ಮಹಿಳೆಯರು - ಜರ್ಮೇನ್ ಗ್ರೀಯರ್ (ಸಂ. ೨೫, ನವೆಂಬರ್, ೧೯೮೯)

68. ವರದಕ್ಷಿಣೆ: ಒಂದು ಸಮಾಜಶಾಸ್ತ್ರೀಯ ಅಧ್ಯಯನ - ಅಚಲ (ಸಂ. ೨೬, ಜನವರಿ, ೧೯೯೦)

69. ಮರೆತುಹೋಗಿದ್ದ ಮಹಿಳಾ ಹಕ್ಕುಗಳ ಘೋಷಣೆ - ಅಚಲ (ಸಂ. ೨೬, ಜನವರಿ, ೧೯೯೦)

70. ವರ್ಜೀನಿಯಾ ವುಲ್ಫಳ 'A Room of One's own' - ಡಾ. ಅನುಪಮಾ ನಿರಂಜನ (ಸಂ. ೨೭, ಮಾರ್ಚ್, ೧೯೯೦)

71. ವಿವಿಧ ಸಾಮಾಜಿಕ ಅನುಭವ ಲೋಕಗಳು ಮತ್ತು ಸಾಹಿತ್ಯದ ಆಕೃತಿ - ಮಹಿಳೆಯ ಅನುಭವ - ಸೀಮಂತಿನಿ ನಿರಂಜನ (ಸಂ. ೨೭, ಮಾರ್ಚ್, ೧೯೯೦)

72. ಸಾಕ್ಷರತೆ - ಹೆಣ್ಣುಮಗು - ಎನ್. ಗಾಯತ್ರಿದೇವಿ (ಸಂ. ೨೭, ಮಾರ್ಚ್, ೧೯೯೦)

73. ರಂಗನಾಯಕಮ್ಮ - ಒಂದು ಕಿರುಚಿತ್ರ - ವಿ. ವೆಂಕಟಸುಬ್ಬಯ್ಯ (ಸಂ. ೨೭, ಮಾರ್ಚ್, ೧೯೯೦)

74. ನನ್ನ ಕತೆ... ನಮ್ಮ ಕತೆ: (ದಾಂಪತ್ಯದೊಳಗಿನ ದೌರ್ಜನ್ಯಗಳ ವಿಶ್ಲೇಷಣೆ) - ನೇಮಿಚಂದ್ರ (ಸಂ. ೨೭, ಮಾರ್ಚ್, ೧೯೯೦)

75. ಕೇರಳದಲ್ಲಿ ಮಹಿಳೆ - ಹೇಮಲತಾ ಮಹಿಷಿ (ಸಂ. ೨೮, ಮೇ, ೧೯೯೦)

76. ಫಣಿಯಮ್ಮ: ಒಂದು ವಿವೇಚನೆ - ಡಾ. ಬಿ.ಎನ್. ಸುಮಿತ್ರಾಬಾಯಿ (ಸಂ. ೨೮, ಮೇ, ೧೯೯೦)

77. ಸ್ತ್ರೀಪರವಾದದ ಅತಿರೇಕಗಳು - ಎಚ್.ಎಸ್. ಪಾರ್ವತಿ (ಸಂ. ೨೮, ಮೇ, ೧೯೯೦)

78. ಟಿಪ್ಪು ಮತ್ತು ಸುಧಾರಣೆ - ನೇಮಿಚಂದ್ರ (ಸಂ. ೨೯, ಜುಲೈ, ೧೯೯೦)

79. ರಂಗಮಾಧ್ಯಮದಲ್ಲಿ ಲಿಂಗಭೇದವೇ? - ಡಾ. ವಿಜಯಾ (ಸಂ. ೨೯, ಜುಲೈ, ೧೯೯೦)

80. ಮಹಿಳೆ, ಅಭಿವೃದ್ಧಿ, ಸಮೂಹ ಮಾಧ್ಯಮ - ಭಾರ್ಗವಿ ನಾಗರಾಜ್ (ಸಂ. ೨೯, ಜುಲೈ, ೧೯೯೦)

81. ಮಹಿಳೆಯರ ಮೇಲಿನ ದೌರ್ಜನ್ಯ (ವೈದ್ಯಕೀಯ ಇಲಾಖೆಯ ಪಾತ್ರ) - ಡಾ. ಗಿರಿಜಮ್ಮ (ಸಂ. ೩೦, ಸೆಪ್ಟೆಂಬರ್, ೧೯೯೦)

82. ಒಗ್ಗೂಡಿಸುವ ಧ್ವನಿಗಳು - ಭಾರ್ಗವಿ ನಾಗರಾಜ್ (ಸಂ. ೩೦, ಸೆಪ್ಟೆಂಬರ್, ೧೯೯೦)

83. ರಾಷ್ಟ್ರೀಯ ಮಹಿಳಾ ಆಯೋಗ: 1990 - ಎಸ್.ಕೆ. ಪೂರ್ಣಿಮಾದೇವಿ (ಸಂ. ೩೦, ಸೆಪ್ಟೆಂಬರ್, ೧೯೯೦)

84. ಸಾವಿತ್ರಮ್ಮ ಮತ್ತು ಅವರ ಸಮಕಾಲೀನ ಕತೆಗಾರ್ತಿಯರು - ಡಾ. ಬಿ.ಎನ್. ಸುಮಿತ್ರಾಬಾಯಿ (ಸಂ. ೩೧-೩೨, ನವೆಂಬರ್ ೯೦ - ಜನವರಿ ೯೧)

85. ಅಗ್ನಿಕನ್ಯೆ ದ್ರೌಪದಿ - ರಶ್ಮಿ ಗೋಳಿ (ಸಂ. ೩೧-೩೨, ನವೆಂಬರ್ ೯೦ - ಜನವರಿ ೯೧)

86. ಎಚ್.ವಿ. ಸಾವಿತ್ರಮ್ಮನವರ ಕತೆಗಳು - ಒಂದು ವಿವೇಚನೆ - ಕೆ. ಸತ್ಯನಾರಾಯಣ (ಸಂ. ೩೩, ಜುಲೈ, ೧೯೯೧)

87. ಅಂಬೇಡ್ಕರ್ ಮತ್ತು ಮಹಿಳೆ - ಅಹಲ್ಯಾ ರಂಗ್ನೇಕರ್ - ಅನುವಾದ: ಸತ್ಯಾ (ಸಂ. ೩೪, ಮೇ, ೧೯೯೧)

88. ಯೋಜನಾ ನೀತಿ: ಏಕೆ ಈ ನಿರ್ಲಕ್ಷ್ಯ? - ಆಶಾ (ಸಂ. ೩೪, ಮೇ, ೧೯೯೧)

89. ತಾಯ್ತನವೆಂಬ ಮಿಥ್ಯೆ - ಡಾ. ಮಾರ್ಗರೆಟ್ ಬಿಸ್ವಾಸ್ - ಅನು: ಶೀಲಾ ಮಳೀಮಠ (ಸಂ. ೩೭, ಡಿಸೆಂಬರ್, ೧೯೯೧)

90. ಹೆಣ್ಣಿನ ಕಣ್ಣೀರಿಗೆ ಅಭಿವ್ಯಕ್ತಿ: ಸಿರಿಜಾತ್ರೆ - ಜಿ.ಎನ್. ಮೋಹನ್ (ಸಂ. ೩೯, ಮಾರ್ಚ್, ೧೯೯೨)

91. ಕಲ್ಯಾಣಮ್ಮ: ವಿಶೇಷ ಲೇಖನ - ಬಿ.ಎನ್. ಸುಮಿತ್ರಾಬಾಯಿ (ಸಂ. ೩೯, ಮಾರ್ಚ್, ೧೯೯೨)

92. ಸ್ತ್ರೀವಾದ ಮತ್ತು ಮಾನವಶಾಸ್ತ್ರ - ನೇಮಿಚಂದ್ರ (ಸಂ. ೩೯, ಮಾರ್ಚ್, ೧೯೯೨)

93. ಪುತ್ರಕಾಮೇಷ್ಟಿ - ಮತ್ತೆ ಅವೈಚಾರಿಕತೆಯ ಕಂದರಕ್ಕೆ - ನೇಮಿಚಂದ್ರ (ಸಂ. ೩೯, ಮಾರ್ಚ್, ೧೯೯೨)

94. ಸತ್ಯಜಿತ್‌ರಾಯ್ ಅವರ ಕೆಲವು ಚಿತ್ರಗಳಲ್ಲಿ ಸ್ತ್ರೀ ದೃಷ್ಟಿ - ಮಾಲಿನಿ ಭಟ್ಟಾಚಾರ್ಯ (ಸಂ. ೪೦, ಜುಲೈ, ೧೯೯೨)

95. ಮಹಿಳೆ ಮತ್ತು ವಿಜ್ಞಾನ - ನೇಮಿಚಂದ್ರ (ಸಂ. ೪೧, ಸೆಪ್ಟೆಂಬರ್-ನವೆಂಬರ್, ೧೯೯೨)

96. ಮಹಿಳಾ ಇತಿಹಾಸ - ಇಣುಕುನೋಟ - ರೋಸಲಿಂಡ್ ಮೈಲ್ಸ್ - ಅನುವಾದ: ಸಂಪಿಗೆ ಪುಷ್ಪ (ಸಂ. ೪೧, ಸೆಪ್ಟೆಂಬರ್-ನವೆಂಬರ್, ೧೯೯೨)

97. ಏಡ್ಸ್ ಮತ್ತು ಮಹಿಳೆ - ನೇಮಿಚಂದ್ರ (ಸಂ. ೪೨, ಜನವರಿ, ೧೯೯೩)

98. ಕ್ಯಾತೆ ಕೋಲ್‌ವಿಜ್: ದುರಂತದ ಮುಖಗಳು - ರವಿಕುಮಾರ್ ಕಾಶಿ (ಸಂ. ೪೨, ಜನವರಿ, ೧೯೯೩)

99. ಆಂಧ್ರದ ಮಹಿಳಾ ಪತ್ರಿಕೆ - 19ನೇ ಶತಮಾನದಲ್ಲಿ - ವಿ. ರಾಮಕೃಷ್ಣ (ಸಂ. ೪೨, ಜನವರಿ, ೧೯೯೩)

100. ಮಲಯಾಳಿ ಮಹಿಳಾ ಕಥಾ ಸಾಹಿತ್ಯದ ಸ್ತ್ರೀವಾದಿ ನೆಲೆಗಳು - ರವೀಂದ್ರನ್. ಅನುವಾದ: ಸುಮಿತ್ರಾ (ಸಂ. ೪೩, ಮಾರ್ಚ್, ೧೯೯೩)

101. ಆಫ್ರಾ ಬೆನ್: ಹದಿನೇಳನೇ ಶತಮಾನದ ಅಸಾಧಾರಣ ಬುದ್ಧಿಜೀವಿ - ಸುಮಿತ್ರಾ (ಸಂ. ೪೩, ಮಾರ್ಚ್, ೧೯೯೩)

102. ಸ್ವಾತಂತ್ರ್ಯಪೂರ್ವದ ವಿಶಿಷ್ಟ ಲೇಖಕಿ - ಜಯಲಕ್ಷ್ಮಿ ಶ್ರೀನಿವಾಸನ್ - ನೇಮಿಚಂದ್ರ (ಸಂ. ೪೪, ಮೇ, ೧೯೯೩)

103. ಮತಾಂಧರ ಜಡ್ಡು ವ್ಯವಸ್ಥೆಯಲ್ಲಿ ಮಹಿಳೆ - ಡಾ. ಜಿ. ರಾಮಕೃಷ್ಣ (ಸಂ. ೪೪, ಮೇ, ೧೯೯೩)

104. ಸಿಂಡ್ರೆಲ್ಲಾ ಕಾಂಪ್ಲೆಕ್ಸ್ (ಕೊಲೆಟ್ ಡೌಲಿಂಗ್ ಕೃತಿ ಪರಿಚಯ) - ಚಂದ್ರ (ಸಂ. ೪೪, ಮೇ, ೧೯೯೩)

105. ತತ್ವಶಾಸ್ತ್ರದ ಮೇಲೆ ಧರ್ಮಶಾಸ್ತ್ರದ ಹಿಡಿತ - ಡಾ. ದೇವಿಪ್ರಸಾದ್ ಚಟ್ಟೋಪಾಧ್ಯಾಯ - ಸಂಗ್ರಹಾನುವಾದ: ಡಾ. ಜಿ. ರಾಮಕೃಷ್ಣ (ಸಂ. ೪೫, ಜುಲೈ, ೧೯೯೩)

106. ಸಶಸ್ತ್ರ ಸೇನೆಗೆ ಮಹಿಳೆಯ ಪ್ರವೇಶ - ನೇಮಿಚಂದ್ರ (ಸಂ. ೪೫, ಜುಲೈ, ೧೯೯೩)

107. 'ವೀರಮಾತೆ'ಯ ವನಿತೆ ವೆಂಕಮ್ಮ - ಬಿ.ಎನ್. ಸುಮಿತ್ರಾಬಾಯಿ (ಸಂ. ೪೬, ಸೆಪ್ಟೆಂಬರ್, ೧೯೯೩)

108. ದ್ರಾವಿಡ ಚಳುವಳಿಯಲ್ಲಿ ಮಹಿಳಾ ಪ್ರಶ್ನೆ - ಎಸ್. ಆನಂದಿ (ಸಂಗ್ರಹಾನುವಾದ: ಅಚಲ) (ಸಂ. ೪೬, ಸೆಪ್ಟೆಂಬರ್, ೧೯೯೩)

109. ಸೀರೆಯಲ್ಲಿ ಸಿಕ್ಕಿಕೊಂಡವರು - ನೇಮಿಚಂದ್ರ (ಸಂ. ೪೬, ಸೆಪ್ಟೆಂಬರ್, ೧೯೯೩)

110. ಆಸ್ಟ್ರೇಲಿಯಾದಲ್ಲಿ ಕಾನೂನಿನ ಅವ್ಯವಸ್ಥೆ - ವಿಚಾರಿ (ಸಂ. ೪೭, ನವೆಂಬರ್, ೧೯೯೩)

111. ವಿಜ್ಞಾನ ಸರಹದ್ದು: ಮಹಿಳೆಯರು ದೀರ್ಘಾಯುಷಿಗಳೇಕೆ? - ನೇಮಿಚಂದ್ರ (ಸಂ. ೪೭, ನವೆಂಬರ್, ೧೯೯೩)

112. ಒಂದು ಸುಸಂಗತ ಅತೀತದ ಹುಡುಕಾಟದಲ್ಲಿ - ಡಾ. ವಿಜಯಾ ದಬ್ಬೆ (ಸಂ. ೪೮, ಮಾರ್ಚ್, ೧೯೯೪)

113. ಶಬ್ದವೇಗವನ್ನು ಮೀರಿದ ಹಾರಾಟಗಾರ್ತಿ - ಬಾರ್ಬರಾ ಹಾರ್ಮರ್ - ನೇಮಿಚಂದ್ರ (ಸಂ. ೪೮, ಮಾರ್ಚ್, ೧೯೯೪)

114. ಕಿರಣ್ ಬೇಡಿ: ಕಾರಾಗೃಹದ ಕತ್ತಲಕೋಣೆಗಳಿಗೆ ಬೆಳಕಿನ ಸ್ಪರ್ಶ - ಅಚಲ (ಸಂ. ೪೮, ಮಾರ್ಚ್, ೧೯೯೪)

115. ಪುರುಷ ವೇಶ್ಯೆಯರು - ವಿಕೃತ ಸಮಾಜದ ಮತ್ತೊಂದು ಅಭಿವ್ಯಕ್ತಿ - ನೇಮಿಚಂದ್ರ (ಸಂ. ೪೯, ಮೇ, ೧೯೯೪)
116. ಮಹಿಳೆ ಮತ್ತು ಕೋಮುವಾದ - ಸಾರಾ ಅಬೂಬಕ್ಕರ್ (ಸಂ. ೪೯, ಮೇ, ೧೯೯೪)
117. ಕುವೆಂಪು ಅವರು ಚಿತ್ರಿಸಿರುವ ಸುಬ್ಬಮ್ಮ: ಒಂದು ಸ್ತ್ರೀವಾದಿ ನೋಟ - ಬಿ.ಎನ್. ಸುಮಿತ್ರಾಬಾಯಿ (ಸಂ. ೫೦, ಜುಲೈ, ೧೯೯೪)
118. ಸ್ತ್ರೀ ವಿಮೋಚನೆಯ ಗಟ್ಟಿದನಿ: ಜಾರ್ಜ್ ಸ್ಯಾಂಡ್ - ನೇಮಿಚಂದ್ರ (ಸಂ. ೫೦, ಜುಲೈ, ೧೯೯೪)
119. ಅನುಭವಿ ಅನುಭಾವಿ ಲೇಖಕಿ: ಶ್ರೀಮತಿ ಸರಸ್ವತೀ ಬಾಯಿ ರಾಜವಾಡೆ - ವೈದೇಹಿ (ಸಂ. ೫೧, ಸೆಪ್ಟೆಂಬರ್, ೧೯೯೪)
120. ಕರ್ನಾಟಕದಲ್ಲಿ ಮಹಿಳೆಯರ ಸ್ಥಿತಿಗತಿಗಳು - ಬಿ.ಎನ್. ಸುಮಿತ್ರಾಬಾಯಿ (ಸಂ. ೫೧, ಸೆಪ್ಟೆಂಬರ್, ೧೯೯೪)
121. ಬಡತನದ ಬೇಗೆಯಲ್ಲಿ ಸ್ಮಾಕಿಂಗ್ ಕಲಾಕಾರ್ತಿಯರು - ಶಾಂತಾ ನಾಗರಾಜ್ (ಸಂ. ೫೨, ನವೆಂಬರ್, ೧೯೯೪)
122. ವಾದ, ಸ್ತ್ರೀವಾದ, ಭಾರತೀಯ ಸ್ತ್ರೀವಾದ - ಸೀಮಂತಿನಿ ನಿರಂಜನ (ಸಂ. ೫೨, ನವೆಂಬರ್, ೧೯೯೪)
123. ಭಾರತದಲ್ಲಿ ವೈಧವ್ಯ, ವೃದ್ಧಾಪ್ಯ ಮತ್ತು ಅವಲಂಬನೆ - ರಜನಿ ಪಲರಿವಾಲ - ಅನು: ಬಿ.ಎನ್. ಸುಮಿತ್ರಾಬಾಯಿ (ಸಂ. ೫೨, ನವೆಂಬರ್, ೧೯೯೪)
124. ಮನೆ ಬೆಳಗುವವರ ಬವಣೆ - ಶಾಂತಾ ನಾಗರಾಜ್ (ಸಂ. ೫೪, ಜನವರಿ, ೧೯೯೫)
125. ಇಲ್ಲಿ ನೋಡಿ! ಚರಿತ್ರೆ ನಿರ್ಮಿಸಿದ ಭಾರತೀಯ ವಿಮಾನ ಚಾಲಕಿಯರನ್ನು ! - ನೇಮಿಚಂದ್ರ (ಸಂ. ೫೪, ಜನವರಿ, ೧೯೯೫)
126. ಭಾರತೀಯ ಸಮಾಜ, ಸಂಸ್ಕೃತಿ, ಮಹಿಳೆ - ಸಾರಾ ಅಬೂಬಕ್ಕರ್ (ಸಂ. ೫೪, ಜನವರಿ, ೧೯೯೫)
127. ಹೋರಾಟದ ಆಶಾಕಿರಣ ಸೂರೆ - ದೇವಿ (ಸಂ. ೫೫, ಮಾರ್ಚ್, ೧೯೯೫)
128. ಜಾಗತಿಕ ಭೂಪಟದಲ್ಲಿ ಮಹಿಳಾದಿನ - ಅಚಲ (ಸಂ. ೫೫, ಮಾರ್ಚ್, ೧೯೯೫)
129. ಅಚ್ಚಳಿಯದ ಸ್ತ್ರೀ ಶಿಲ್ಪಿಗಳ ಕೆತ್ತಿದ ಕತೆಗಾರ್ತಿ - ಕಾತ್ಯಾಯಿನಿ - ಬಿ.ಎನ್. ಸುಮಿತ್ರಾಬಾಯಿ (ಸಂ. ೫೬, ಮೇ, ೧೯೯೫)
130. ಪಂಚಾಯಿತಿ ರಾಜ್ಯದಲ್ಲಿ ಮಹಿಳೆಯರು - ಡಾ. ಮೀರಾ ಚಕ್ರವರ್ತಿ (ಸಂ. ೫೬, ಮೇ, ೧೯೯೫)
131. ಅಂಬಿಕಾತನಯದತ್ತರ ಸ್ತ್ರೀ ಕಲ್ಪನೆ - ಡಾ. ಜ್ಯೋತ್ಸ್ನಾ ಕಾಮತ್ (ಸಂ. ೫೭, ಜುಲೈ, ೧೯೯೫)
132. ಗರ್ಭಧರಿಸುವ ಗಂಡುಗಳು - ನೇಮಿಚಂದ್ರ (ಸಂ. ೫೭, ಜುಲೈ, ೧೯೯೫)
133. 'ಮಿತಾಕ್ಷರಾ'ದಲ್ಲಿ ಮಹಿಳೆ - ಡಾ. ಜ್ಯೋತ್ಸ್ನಾ ಕಾಮತ್ (ಸಂ. ೫೮, ಸೆಪ್ಟೆಂಬರ್, ೧೯೯೫)
134. ಗೋರಿಯಿಂದೆದ್ದು ಬಂದ ತಂದೆ - ನೇಮಿಚಂದ್ರ (ಸಂ. ೫೮, ಸೆಪ್ಟೆಂಬರ್, ೧೯೯೫)
135. ಲೈಂಗಿಕ ಭಯೋತ್ಪಾದನೆ ನಿಲ್ಲಲಿ - ನೇಮಿಚಂದ್ರ (ಸಂ. ೬೦, ನವೆಂಬರ್, ೧೯೯೫)
136. ನನ್ನ ಬೀಜಿಂಗ್ ಅನುಭವ - ಕೆ.ಎಸ್. ವಿಮಲ (ಸಂ. ೬೦, ನವೆಂಬರ್, ೧೯೯೫)

## ಜಾಗೃತಿ ನಡೆಸಿದ ಸ್ಪರ್ಧೆಗಳು

ಮಹಿಳಾ ಜಾಗೃತಿ ಎನ್ನುವುದು ಸರ್ವತೋಮುಖವಾಗಿ ಬೆಳೆಯಬೇಕಾದರೆ ಹತ್ತು ಹಲವು ರೀತಿಗಳಲ್ಲಿ ಪ್ರಯತ್ನಗಳು ನಡೆಯಬೇಕಾಗಿವೆ. ಅಂಥ ಪ್ರಯತ್ನಗಳಲ್ಲಿ ಜಾಗೃತಿ ಮಹಿಳಾ ಅಧ್ಯಯನ ಕೇಂದ್ರವು ಆಗಾಗ್ಗೆ ನಡೆಸುವ ಸ್ಪರ್ಧೆಗಳೂ ಒಂದು. ಸಾಧಾರಣವಾಗಿ ಸ್ತ್ರೀಪರವಾದ ವಿಚಾರ, ವಿಮರ್ಶೆಗಳು ಹೊಸ ದೃಷ್ಟಿಕೋನದಿಂದ 'ಸ್ತ್ರೀವಾದ'ದ ಮೂಲಕ ಹರಡುತ್ತಿರುವ ಈ ಕಾಲದಲ್ಲೇ ಈ ಬಗ್ಗೆ ಗೊಂದಲಗಳೂ, ಅಸಂಗತ ಹೇಳಿಕೆಗಳೂ ಹರಡತೊಡಗಿ, ಅತ್ಯಂತ ಸಾಮಾನ್ಯರನ್ನೂ ದಿಕ್ಕು ತಪ್ಪಿಸುತ್ತಿದೆ. ಇದನ್ನು ತಪ್ಪಿಸುವುದೇ ಇಂಥ ಸ್ಪರ್ಧೆಗಳ ಮುಖಾಂತರ ನಡೆಯುತ್ತಿರುವ ಸಣ್ಣ ಪ್ರಯತ್ನ.

ಚರ್ಚಾಸ್ಪರ್ಧೆಗೆ 'ಜೀವನ ಭದ್ರತೆಗೆ ವಿವಾಹವೇ ಸಾಧನ' ಎನ್ನುವ ಶೀರ್ಷಿಕೆಯನ್ನು ನೀಡಲಾಗಿತ್ತು ಮತ್ತು ಅದಕ್ಕಿಂತ ಮೊದಲು ನಡೆದ ಪ್ರಬಂಧ ಸ್ಪರ್ಧೆಗೆ **'ಮಹಿಳಾ ಸಮಾನತೆಯ ಸಾಧನೆಗೆ ಮೀಸಲಾತಿ ಅಗತ್ಯವೇ?'** ಎನ್ನುವ ವಿಷಯ ನೀಡಲಾಗಿತ್ತು. ನಾವು ನಿರೀಕ್ಷಿಸಿದ್ದಂತೆ ಸುಮಾರು ಎಪ್ಪತ್ತೈದು ಮಂದಿ ವಿದ್ಯಾರ್ಥಿನಿಯರೂ, ಉದ್ಯೋಗಸ್ಥೆಯರೂ, ಗೃಹಿಣಿಯರೂ ತುಂಬ ಉತ್ಸಾಹದಿಂದ ಪಾಲ್ಗೊಂಡಿದ್ದುದು ಸಂಚಾಲಕರಿಗೆ ತುಂಬ ಸಂತೋಷವನ್ನು ನೀಡಿತು.

ಚರ್ಚಾಸ್ಪರ್ಧೆಯ ವಿಷಯವಾಗಿ ಪ್ರಾರಂಭದಲ್ಲೇ ಸೂಕ್ಷ್ಮವಾಗಿ ನಮ್ಮ ನಿರೀಕ್ಷೆಯನ್ನೂ ತಿಳಿಸಿದ್ದೆವು. ಅದರಲ್ಲಿ ಮುಖ್ಯವಾಗಿ ವಿಷಯದ ಪರ - ವಿರೋಧ ಎನ್ನುವ ಮಾತೇ ಇಲ್ಲ, ವಿಷಯ ಮಂಡನೆಗೆ ತರ್ಕಬದ್ಧವಾಗಿ ಪರ-ವಿರೋಧಗಳೆರಡನ್ನೂ ಎಲ್ಲರೂ (ಅಥವಾ ಒಬ್ಬರೇ) ಬಳಸಿಕೊಳ್ಳಬಹುದು ಎಂದು ವಿಶಾಲಾವಕಾಶವನ್ನು ಕಲ್ಪಿಸಿದ್ದೆವು. ನಮ್ಮದು ಕೇವಲ 'ವಾದಕ್ಕಾಗಿ ವಾದ' ವಾಗಿರಲಿಲ್ಲ. ಇದು ಜೀವನಕ್ಕಾಗಿ ವಾದ. ಆದ್ದರಿಂದಲೇ ಪರ-ವಿರೋಧದ ಅಂಶಗಳನ್ನು ಒಬ್ಬರೇ ಸ್ಪರ್ಧಿ ಸಮರ್ಥವಾಗಿ ಬಳಸಿಕೊಳ್ಳಬಹುದಿತ್ತು. ಇಂಥ ಮುಕ್ತ ಸೌಲಭ್ಯವನ್ನು ವಿದ್ಯಾರ್ಥಿನಿಯರಿರಲಿ ಪ್ರೌಢೆಯರೂ ಬಳಸಿಕೊಳ್ಳಲಿಲ್ಲವೆನ್ನುವುದು ದುಃಖದ ವಿಷಯವೇ.

'ಜೀವನ ಭದ್ರತೆಗೆ ವಿವಾಹವೇ ಸಾಧನ' ಯಾಕಾಗಬಾರದು? ಹೆಣ್ಣಿನ ಅಡುಗೆಮನೆ ಕೆಲಸಗಳಿಗೂ, ಶಿಶು ಸಂಗೋಪನೆಗೂ, ಒಂದು ಗೌರವ ಸ್ಥಾನ ಸಿಕ್ಕಾಗ, ಗಂಡಿನ ಪ್ರತಿ ಕೆಲಸಕ್ಕೂ ಬೆಲೆ ಇರುವಂತೆ ಹೆಣ್ಣಿನ ಪ್ರತಿ ಕೆಲಸಕ್ಕೂ ಬೆಲೆ ಸಿಕ್ಕಾಗ, ಕುಟುಂಬದ ಎಲ್ಲ ನಿರ್ಣಯಗಳನ್ನೂ ಹೆಣ್ಣು ಗಂಡು ಕೂಡಿ ಮಾಡಿದಾಗ, ಸಮಾನತೆ ಎನ್ನುವುದನ್ನು ಕುಟುಂಬ ವ್ಯವಸ್ಥೆಯಲ್ಲಿ ಆರೋಗ್ಯಕರವಾಗಿ ಜಾರಿಗೆ ತಂದಾಗ, ವಿವಾಹ, ಗಂಡಿನ ಜೀವನಕ್ಕೂ ಭದ್ರತೆ ತಂದುಕೊಡುತ್ತದೆ. ಹಾಗೆಯೇ, ಹೆಣ್ಣಿಗೂ ವಿವಾಹಜೀವನ ಭದ್ರತೆ ತಂದು ಕೊಡಬಲ್ಲದು. ಆದರೆ ಸಾಮಾನ್ಯವಾಗಿ ಹೆಣ್ಣಿಗೆ ವಿವಾಹವನ್ನು ಜೀವನದ ಒಂದು ವೃತ್ತಿಯೆಂಬಂತೆ ಪರಿಗಣಿಸುವ ಪರಿಪಾಠ ಇದೆ. ಭಾರತೀಯ ಸಂದರ್ಭದಲ್ಲಂತೂ ವಿವಾಹ ಹೆಣ್ಣಿಗೆ ಅನಿವಾರ್ಯ ಸಾಮಾಜಿಕ ಸಂಸ್ಥೆಯೆಂದೇ ಭಾವಿಸುವ ರೂಢಿಯಿದೆ. ಈ ರೂಢಿಗತ ನಂಬಿಕೆಗಳು ಅಳಿಸಿ ವಿವಾಹ ಹೆಣ್ಣಿಗೆಂತೋ ಹಾಗೇ ಗಂಡಿಗೂ ಅವಶ್ಯಕ ಕ್ರಿಯೆಯಾದರೂ ಅನಿವಾರ್ಯ ಸಂಸ್ಥೆಯಲ್ಲ ಎಂಬ ಆಲೋಚನೆಯನ್ನು ರೂಢಿಸುವುದರ ಜೊತೆಗೆ ಹೆಣ್ಣಿನ ಜೀವನಭದ್ರತೆಗೆ ಅವಳ ಆರ್ಥಿಕ ಭದ್ರತೆಯತ್ತ ಹೆಚ್ಚು ಒತ್ತುಕೊಡಬೇಕಾಗಿದೆ.

ಇನ್ನು ಪ್ರಬಂಧದ ವಿಷಯ 'ಮಹಿಳಾ ಸಮಾನತೆಯ ಸಾಧನೆಗೆ ಮೀಸಲಾತಿ ಅಗತ್ಯವೇ?' ಎಂಬ ವಿಷಯವನ್ನು ಚರ್ಚಿಸುವಾಗಲೂ ಮಹಿಳಾ ಸಮಾನತೆ ಮತ್ತು ಸ್ವಾತಂತ್ರ್ಯದ ಬಗ್ಗೆ ಇನ್ನೂ ಹೆಚ್ಚು ಸ್ಪಷ್ಟವಾದ ತಿಳುವಳಿಕೆಯನ್ನು ಸ್ಪರ್ಧಿಗಳು ಬೆಳೆಸಿಕೊಳ್ಳಬೇಕಾದ ಅಗತ್ಯವಿದೆ. 'ಹೆಣ್ಣಿಗೆ ಬದುಕುವ ಹಕ್ಕಿದೆ' ಎಂಬುದನ್ನು ಎಲ್ಲ ಪ್ರಬಂಧಕಾರ್ತಿಯರೂ ಒಪ್ಪುತ್ತಾರಾದರೂ, ಅದು 'ಹೇಗೆ?' ಎನ್ನುವುದರ ಬಗ್ಗೆ ನಡೆಯುವ ಚರ್ಚೆಯಲ್ಲಿ ಸ್ಪಷ್ಟತೆಯಿಲ್ಲ. ಶತಮಾನಗಳಿಂದ ಹಿಂದುಳಿದಿರುವ, ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಕೆಳಗೆ ನೂಕಲ್ಪಟ್ಟ ಹೆಣ್ಣು ಪ್ರಸ್ತುತ ಸಮಾಜದಲ್ಲಿ ಘನತೆವೆತ್ತ ಬದುಕ ಬಾಳಬೇಕೆಂದಾಗ ಯಾವ ಯಾವ ಕ್ಷೇತ್ರದಲ್ಲಿ ಮೀಸಲಾತಿ ಅಗತ್ಯವಿದೆ, ಎಷ್ಟರಮಟ್ಟಿಗೆ ಅಗತ್ಯವಿದೆ, ಆ ಸೌಲಭ್ಯ ಪಡೆಯಲು ಮಹಿಳೆಯರು ಸನ್ನದ್ಧರಾಗಬೇಕಾದ ಸಂಪನ್ಮೂಲತೆ ಎಷ್ಟು ಬೇಕಾಗಿದೆ, ಎಂಬ ಅಂಶಗಳ ಕಡೆ ಚರ್ಚೆ ನಡೆದಿದ್ದರೆ ಚೆನ್ನಾಗಿರುತ್ತಿತ್ತು. ಪ್ರಬಂಧವಾಗಲೀ ಚರ್ಚೆಯಾಗಲೀ ನಾವು ನಿರೀಕ್ಷಿಸಿದ್ದ ಮಟ್ಟಕ್ಕೆ ಏರಲಿಲ್ಲವೆಂಬುದು ಸ್ವಲ್ಪ ಅಸಮಾಧಾನವನ್ನು ತಂದರೂ ಪಾಲ್ಗೊಳ್ಳುವಿಕೆಯ ಶಿಸ್ತನ್ನು ಕಂಡಾಗ ತುಂಬ ಸಂತೋಷವೆನಿಸುತ್ತದೆ. ಬಹುಶಃ ನಮ್ಮ ನಿರೀಕ್ಷೆಗಳು 'ಮರಳಿ ಯತ್ನವ ಮಾಡು, ಮರಳಿ ಯತ್ನವ ಮಾಡು' ಎನ್ನುವ ಯತ್ನದಿಂದ ಸಾಕಾರಗೊಳ್ಳಬಹುದೇನೋ. ಅದಕ್ಕಾಗಿ ನಾವೆಲ್ಲ ಸಮಾಧಾನ ಚಿತ್ತದಿಂದ ಕಾಯೋಣ.

– ಶಾಂತಾ ನಾಗರಾಜ್

---

## ಸ್ಪರ್ಧೆಯ ಫಲಿತಾಂಶಗಳು

**ಚರ್ಚಾಸ್ಪರ್ಧೆ ( ವಿದ್ಯಾರ್ಥಿನಿಯರ ವರ್ಗ )**

1. ಸಹನಾ ಉಡುಪ - ಪ್ರಥಮ ಬಹುಮಾನ (ಎನ್.ಎಮ್.ಕೆ.ಆರ್.ವಿ. ಕಾಲೇಜು)
2. ಕುಸುಮಾ ಬಿ. - ದ್ವಿತೀಯ ಬಹುಮಾನ (ಎನ್.ಎಮ್.ಕೆ.ಆರ್.ವಿ. ಕಾಲೇಜು)
3. ಚಂದ್ರಿಕಾ - ತೃತೀಯ ಬಹುಮಾನ (ವಿಜಯನಗರ ಪ್ರಥಮ ದರ್ಜೆ ಸರ್ಕಾರಿ ಕಾಲೇಜು)
4. ಸಿಂಧೂರಾವ್ ಟಿ. - ನಾಲ್ಕನೆಯ ಬಹುಮಾನ (AMIE)
5. ಅನುರಾಧ ನಾಯರ್ - ಐದನೆಯ ಬಹುಮಾನ (RVCE)

## ಮಹಿಳಾ ವರ್ಗ

1. ಶ್ರೀಮತಿ ಶೀಲಾ ಆರ್.ವಿ.
2 ಶ್ರೀಮತಿ ಕೆ.ಆರ್. ಭಾರತಿ
3. ಶ್ರೀಮತಿ ಎಸ್. ಮಿತ್ರವೃಂದ

## ಪ್ರಬಂಧ ಸ್ಪರ್ಧೆ

(ವಿದ್ಯಾರ್ಥಿನಿಯರ ವರ್ಗ)

1. ಸ್ವರ್ಣಶ್ರೀ ಎಸ್. ರಾವ್ - ಪ್ರಥಮ ಬಹುಮಾನ (ICWA ಅಂತಿಮ ವರ್ಷ)
2. ಧನಲಕ್ಷ್ಮೀ - ದ್ವಿತೀಯ ಬಹುಮಾನ (ವಿಶ್ವೇಶ್ವರಪುರಂ ಕಾನೂನು ಕಾಲೇಜು)
3. ಅನು ಚೆಂಗಪ್ಪ - ತೃತೀಯ ಬಹುಮಾನ (ವಿಶ್ವವಿದ್ಯಾಲಯ ಕಾನೂನು ಕಾಲೇಜು)
4. ಜ್ಯೋತಿ ಎಸ್. - ತೃತೀಯ ಬಹುಮಾನ (ಮಹಾರಾಣಿ ಕಾಲೇಜು)

## ಮಹಿಳಾ ವರ್ಗ

1. ರಮಾ ಗೋವಿಂದರಾಜ್ - ಪ್ರಥಮ ಬಹುಮಾನ
2. ವಿಜಯಲಕ್ಷ್ಮೀ ಎಚ್.ಎನ್. - ದ್ವಿತೀಯ ಬಹುಮಾನ
3. ತೃಪ್ತಿ ಕುಲಕರ್ಣಿ - ತೃತೀಯ ಬಹುಮಾನ

# ಅಚಲ ದಶಮಾನೋತ್ಸವ

**ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ ಮತ್ತು ಕರ್ನಾಟಕ ಪತ್ರಿಕಾ ಅಕಾಡೆಮಿಯ**

ಸಂಯುಕ್ತ ಆಶ್ರಯದಲ್ಲಿ ವಿಚಾರ ಸಂಕಿರಣ: **''ಮಹಿಳೆ ಮತ್ತು ಸಮೂಹ ಮಾಧ್ಯಮಗಳು''**

**ಸ್ಥಳ: ಸೆಂಟ್ರಲ್ ಕಾಲೇಜು, ಸೆನೆಟ್ ಹಾಲ್, ಬೆಂಗಳೂರು**

18-2-96 ಬೆಳಗ್ಗೆ 10-00 ಗಂಟೆಗೆ ಉದ್ಘಾಟನೆ: **ಶ್ರೀ ಎಂ. ಪಿ. ಪ್ರಕಾಶ್** (ಗ್ರಾಮೀಣಾಭಿವೃದ್ಧಿ ಸಚಿವರು)

ಅಚಲ ವಿಶೇಷ ಸಂಚಿಕೆ ಬಿಡುಗಡೆ

**ಶ್ರೀಮತಿ ರಾಮೇಶ್ವರಿ ವರ್ಮ** (ನಿರ್ದೇಶಕರು, ಮಹಿಳಾ ಅಧ್ಯಯನ ಕೇಂದ್ರ, ಮೈಸೂರು, ವಿಶ್ವವಿದ್ಯಾನಿಲಯ)

ಅಧ್ಯಕ್ಷತೆ: **ಶ್ರೀ ಶ್ರೀಧರ ಆಚಾರ್** (ಅಧ್ಯಕ್ಷರು, ಕರ್ನಾಟಕ ಪತ್ರಿಕಾ ಅಕಾಡೆಮಿ)

**ಮೊದಲನೆಯ ಗೋಷ್ಠಿ** 11 ಗಂಟೆಗೆ : **ಮಹಿಳೆ ಮತ್ತು ಮುದ್ರಣ ಮಾಧ್ಯಮ**

ಪತ್ರಿಕೆಗಳಲ್ಲಿ ಮಹಿಳಾ ಮೌಲ್ಯಗಳು : **ಶ್ರೀಮತಿ ಅಖಿಲೇಶ್ವರಿ** (ಪತ್ರಕರ್ತರು, ಡೆಕ್ಕನ್ ಹೆರಾಲ್ಡ್)

ಪತ್ರಿಕೆಗಳು ಮತ್ತು ಮಹಿಳಾ ಚಳುವಳಿ : **ಡಾ|| ವಿಜಯಾ ದಬ್ಬೆ**

(ಅಧ್ಯಾಪಕರು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ)

ಜಾಗತೀಕರಣದ ಹಿನ್ನೆಲೆಯಲ್ಲಿ ಪತ್ರಿಕೆಗಳು ಮತ್ತು ಮಹಿಳೆ : **ಶ್ರೀ ಜಿ.ಎನ್. ಮೋಹನ್** (ಪತ್ರಕರ್ತರು, ಪ್ರಜಾವಾಣಿ)

ಪ್ರತಿಕ್ರಿಯೆ : **ಪಾರ್ವತಿ ಮೆನನ್** (ಪತ್ರಕರ್ತರು, ಫ್ರಂಟ್‌ಲೈನ್), **ಜಯರಾಮ ಅಡಿಗ** (ಪತ್ರಕರ್ತರು, ಕನ್ನಡ ಪ್ರಭ)

ಅಧ್ಯಕ್ಷತೆ : **ಶ್ರೀಮತಿ ನಾಗಮಣಿ ಎಸ್. ರಾವ್** (ಅಧ್ಯಕ್ಷರು : ಕರ್ನಾಟಕ ಲೇಖಕಿಯರ ಸಂಘ, ಮಹಿಳಾ ಪತ್ರಕರ್ತರ ವೇದಿಕೆ)

**ಎರಡನೆಯ ಗೋಷ್ಠಿ** : ಮಧ್ಯಾಹ್ನ 2-30 ಗಂಟೆಗೆ : **ಧ್ವನಿ-ದೃಶ್ಯ ಮಾಧ್ಯಮಗಳು ಮತ್ತು ಮಹಿಳೆ**

ಧ್ವನಿ-ದೃಶ್ಯ ಮಾಧ್ಯಮಗಳಲ್ಲಿ ಹೆಣ್ಣಿನ ಚಿತ್ರಣ : **ಅಬ್ದುಲ್ ರೆಹಮಾನ್ ಪಾಷಾ** (ಚಲನಚಿತ್ರ ಸಾಹಿತಿ ಮತ್ತು ನಿರ್ದೇಶಕರು)

**Women : Reaching for the Skies** : ನೂಪುರ್ ಬಸು (ಎನ್. ಡಿ. ಟಿವಿ)

ಪ್ರತಿಕ್ರಿಯೆ : ಶ್ರೀ ದಿವಸ್ಪತಿ ಹೆಗಡೆ, *ದೂರದರ್ಶನ ವಿಮರ್ಶಕರು*, ಶ್ರೀಮತಿ ಎಸ್. ಮಾಲತಿ, *ರಂಗ ನಿರ್ದೇಶಕರು*, ಶ್ರೀಮತಿ ಲಕ್ಷ್ಮೀ ಚಂದ್ರಶೇಖರ್, *ರಂಗ ವಿಮರ್ಶಕರು*, ಶ್ರೀಮತಿ ಲೀಲಾರಾವ್, *ಮುಖ್ಯಸ್ಥರು, ಸಮೂಹ ಮಾಧ್ಯಮ ವಿಭಾಗ*, ಬೆಂಗಳೂರು ವಿಶ್ವವಿದ್ಯಾಲಯ

ಅಧ್ಯಕ್ಷತೆ : ಡಾ|| ಜ್ಯೋತ್ಸ್ನಾ ಕಾಮತ್ (ನಿವೃತ್ತ ನಿರ್ದೇಶಕರು, ಆಕಾಶವಾಣಿ)

**ಸಮಾರೋಪ ಸಮಾರಂಭ** : ಸಂಜೆ 5-00 ಗಂಟೆಗೆ

ಮುಖ್ಯ ಅತಿಥಿ : ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್ (ಸಣ್ಣ ನೀರಾವರಿ ಸಚಿವರು)

ಅಧ್ಯಕ್ಷತೆ : ಶ್ರೀಮತಿ ಹೇಮಲತಾ ಮಹಿಷಿ, ನ್ಯಾಯವಾದಿಗಳು, ಉಚ್ಚ ನ್ಯಾಯಾಲಯ, ಕರ್ನಾಟಕ

Reg. No. MAG (5) PRC, DEGL 036/89/87

## ನಡೆದು ಬಂದ ದಾರಿ ಹರ್ಷದಾಯಕ
## ಮುಂದಿರುವ ದಾರಿ ಆಶಾದಾಯಕ

ನಲವತ್ತಾರು ವರ್ಷಗಳ ಹಿಂದೆ ನಮ್ಮ ರಾಜ್ಯಾಂಗದ ಶಿಲ್ಪಿಗಳು ದೇಶದ ಭವಿಷ್ಯದ ನಕಾಶೆಯನ್ನು ಬಿಡಿಸಿದರು. ಪ್ರಜೆಗಳಿಗೆ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ನ್ಯಾಯ ದೊರೆಯಬೇಕೆಂಬ ಭರವಸೆ ತುಂಬಿದ ರಾಜ್ಯಾಂಗವನ್ನು ನಮಗಿತ್ತರು. ಜನರ ಮೂಲಭೂತ ಹಕ್ಕುಗಳನ್ನು ಕಾಪಾಡುವ ಹಾಗೂ ಅವರ ಆಶೋತ್ತರಗಳನ್ನು ಈಡೇರಿಸುವ ದಿಸೆಯಲ್ಲಿ ಕರ್ನಾಟಕವು ಸಕ್ರಿಯ ಪಾತ್ರ ವಹಿಸಿದೆ.

ಮುಖ್ಯಮಂತ್ರಿ ಶ್ರೀ ಹೆಚ್.ಡಿ. ದೇವೇಗೌಡ ಅವರ ಒಂದು ವರ್ಷದ ಅಧಿಕಾರಾವಧಿಯಲ್ಲಿ ರಾಜ್ಯ ಸರ್ವತೋಮುಖ ಅಭಿವೃದ್ಧಿ ಸಾಧಿಸಿದೆ.

ಹೊಸ ಸರ್ಕಾರವು ಹಲವಾರು ಜನಪರ ಕಾರ್ಯಕ್ರಮಗಳನ್ನು ಹಮ್ಮಿಕೊಂಡು, ಅನುಷ್ಠಾನಕ್ಕೆ ತಂದಿದೆ. ಈ ಕಾರ್ಯಕ್ರಮಗಳ ಪ್ರತಿಫಲ ಸಕಾಲದಲ್ಲಿ ಅರ್ಹ ಫಲಾನುಭವಿಗಳಿಗೆ ತಲುಪಿಸುವ ಹೊಣೆಯನ್ನು ಸರ್ಕಾರ ಹೊತ್ತಿದೆ.

**ಸ್ಥಿರ ಆಡಳಿತ:** ಸರ್ಕಾರದಲ್ಲಿ ಸ್ಥಿರತೆ, ಆಡಳಿತದಲ್ಲಿ ಸ್ವಚ್ಛತೆ, ಜನಮನಕ್ಕೆ ಸ್ಪಂದಿಸುವ ಮನೋಭಾವ ಜನರ ಬಾಗಿಲಿಗೆ ಕೊಂಡೊಯ್ಯಲು ಕ್ರಮ.

**ವಿದ್ಯುಚ್ಛಕ್ತಿ:** ರಾಜ್ಯದಲ್ಲಿ ದಿನಕ್ಕೆ 62 ದಶಲಕ್ಷ ಯೂನಿಟ್‌ಗಳ ವಿದ್ಯುತ್ ಬೇಡಿಕೆಯಿದೆ. ಆದರೆ ಪೂರೈಕೆಯಾಗುತ್ತಿರುವುದು 53 ದಶಲಕ್ಷ ಯೂನಿಟ್ ಮಾತ್ರ. ಈ ತೀವ್ರ ವಿದ್ಯುತ್ ಅಭಾವವನ್ನು ತ್ವರಿತಗತಿಯಲ್ಲಿ ನೀಗಲು ಕ್ರಮ. ಪಶ್ಚಿಮ ಕರಾವಳಿಯಲ್ಲಿ ಕೇವಲ 6 ತಿಂಗಳ ಅವಧಿಯಲ್ಲಿ 400 ಮೆ.ವಾ. ವಿದ್ಯುತ್ ಉತ್ಪಾದಿಸಬಲ್ಲ ಬಾರ್ಜ್-ಮೌಂಟೆಡ್ ಯೋಜನೆ. ಕೊಜೆಂಟ್ರಿಕ್ಸ್ ವಿದ್ಯುತ್ ಸ್ಥಾವರದಿಂದ ಮುಂದಿನ 3 ವರ್ಷದೊಳಗೆ 1000 ಮೆ.ವಾ. ವಿದ್ಯುತ್ ಉತ್ಪಾದನೆ. ರಾಯಚೂರು 5 ಮತ್ತು 6ನೇ ಘಟಕಗಳಿಂದ ಮುಂದಿನ ಮೂರು ವರ್ಷಗಳಲ್ಲಿ 420 ಮೆ.ವಾ. ವಿದ್ಯುತ್. ಕಗ್ರ ಮತ್ತು ಕೊಡಸಳ್ಳಿ ಯೋಜನೆಗಳಿಂದ ಇನ್ನು 18 ತಿಂಗಳೊಳಗಾಗಿ 270 ಮೆ.ವಾ. ಮತ್ತು ಖಾಸಗಿ ಕ್ಷೇತ್ರಗಳಿಂದ 3000 ಮೆ.ವಾ. ಉತ್ಪಾದನೆಗೆ ಕ್ರಮ.

**ನೀರಾವರಿ:** ಕೃಷ್ಣಾ ಮೇಲ್ದಂಡೆ ಯೋಜನೆ ತ್ವರಿತಗತಿಯಲ್ಲಿ ಪೂರ್ಣಗೊಳ್ಳಲು ಕೃಷ್ಣಾ ಭಾಗ್ಯ ಜಲ ನಿಗಮದ ವತಿಯಿಂದ ಬಾಂಡ್‌ಗಳ ಮೂಲಕ ಹಣ ಸಂಗ್ರಹಿಸಲು ಬಿರುಸಿನ ಕಾರ್ಯಕ್ರಮ. ಎರಡು ಹಂತಗಳ ಈ ಯೋಜನೆಯ ಮೊದಲ ಹಂತದಲ್ಲಿ 4,25,000 ಹೆಕ್ಟೇರ್ ಒಣ ಜಮೀನಿಗೆ 119 ಟಿ.ಎಂ.ಸಿ. ನೀರಿನ ಸೌಲಭ್ಯ.

**ವಸತಿ:** ರೂ. 483 ಕೋಟಿ ವಸತಿ ಯೋಜನೆ, ನಗರ ಪ್ರದೇಶದ ದುರ್ಬಲ ವರ್ಗದವರಿಗೆ, ಬಡಗ್ರಾಮ ವಾಸಿಗಳಿಗೆ ಉಚಿತ ನಿವೇಶನ. 'ಆಶ್ರಯ' ಯೋಜನೆಯಡಿ 60,000 ಮನೆಗಳ ಹಂಚಿಕೆ ಮತ್ತು ಈ ಯೋಜನೆಯಡಿ ಗೃಹ ನಿರ್ಮಾಣಕ್ಕೆ ರೂ. 10,000 ಸಹಾಯಧನ. ರೂ. 10,000 ಬ್ಯಾಂಕ್ ಸಾಲ ಸೌಲಭ್ಯ. ಅಂಬೇಡ್ಕರ್ ಯೋಜನೆಯಡಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಬುಡಕಟ್ಟಿನವರಿಗೆ 25,000 ಮನೆಗಳ ನೀಡಿಕೆ.

ಪರಿಶಿಷ್ಟ ಜಾತಿಯವರ ಅಭಿವೃದ್ಧಿಗೆ ರೂ. 338 ಕೋಟಿ, ಗಿರಿಜನರಿಗೆ ರೂ. 68 ಕೋಟಿ, ಅಂಗವಿಕಲರಿಗೆ ಸವಲತ್ತುಗಳು, ಮಹಿಳೆಯರಿಗೆ ಸರ್ಕಾರಿ ಉದ್ಯೋಗಗಳಲ್ಲಿ, ಪಾಲಿಟೆಕ್ನಿಕ್‌ಗಳಲ್ಲಿ ಮೀಸಲಾತಿ, ಸ್ವಾತಂತ್ರ್ಯ ಹೋರಾಟಗಾರರಿಗೆ ಉಚಿತ ಬಸ್‌ಪಾಸ್, ಅಂಗನವಾಡಿ ಕಾರ್ಯಕರ್ತೆಯರಿಗೆ ಸಂಭಾವನೆಯಲ್ಲಿ ಹೆಚ್ಚಳ.

ಕರ್ನಾಟಕ ಸಮೃದ್ಧ ಭವಿಷ್ಯಕ್ಕೆ ಹಾದಿ

ಕರ್ನಾಟಕ ವಾರ್ತೆ